# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ

## ನಿತ್ಯಪೂಜೆ, ದರ್ಶನಾದಿಗಳ ಕಾರ್ಯಕ್ರಮು,

### ಶನಿ, ಭಾನು, ಸೋಮ ಮತ್ತುಮಂಗಳವಾರಗಳಲ್ಲಿ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ(ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೆಯ ಗಂಟೆ ಬಲಿ ಮತ್ತು ಶಾತ್ತುಮೊರೆ
,, 6–00 ರಿಂದ 12–00 ವರೆಗೆ ಸರ್ವದರ್ಶನ
ಮಧ್ಯಾಹ್ನ 12–00 ರಿಂದ 1–00 ವರೆಗೆ ಶುದ್ಧಿ ಎರಡನೇ ಅರ್ಚನೆ, (ಏಕಾಂತ)
,, 1–00 ರಿಂದ 7–00 ವರೆಗೆ ಸರ್ವದರ್ಶನ
,, 7–00 ರಿಂದ 8–00 ವರೆಗೆ ಶುದಿ , ರಾತ್ರಿ ಕೈಂಕರ್ಯ
ರಾತ್ರಿ 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ಏಕಾಂತಸೇವೆ

### ಬುಧವಾರ, ಸಹಸ್ರ ಕಲಶಾಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ (ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು, ಪಂಚಾಂಗಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ, ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಹಸ್ರ ಕಲಶಾಭಿಷೇಕ (ಅರ್ಜಿತ) ಶುದ್ಧಿ 2ನೇ ಅರ್ಚನೆ
,, 8–00 ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ರಿಂದ ಏಕಾಂತಸೇವೆ (ಅರ್ಜಿತ)

### ಗುರುವಾರ, ತಿರುಪ್ಪಾವಡ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಳ್ಳಿಂಪು, 2 ನೇ ಅರ್ಚನೆ (ಏಕಾಂತ), ತಿರುಪ್ಪಾವಡ ಅಲಂಕರಣ, ಗಂಟೆ ಇತ್ಯಾದಿ
,, 8–00 ರಿಂದ ಸಂಜೆ 6–00 ವರೆಗೆ ಸರ್ವದರ್ಶನ
ಸಂಜೆ 6–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
ರಾತ್ರಿ 8–00 ರಿಂದ 12–00 ವರೆಗೆ ಪೂಲಂಗಿ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ರಿಂದ ಏಕಾಂತಸೇವೆ

### ಶುಕ್ರವಾರ, ಅಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 5–00 ವರೆಗೆ ಸಳ್ಳಿಂಪು ಮತ್ತು ನಿತ್ಯ ಕೈಂಕರ್ಯಗಳು
,, 5–00 ರಿಂದ 7–00 ವರೆಗೆ ಅಭಿಷೇಕ (ಅರ್ಜಿತ)
,, 7–00 ರಿಂದ 8–30 ವರೆಗೆ ಸಮರ್ಪಣೆ
,, 8–30 ರಿಂದ 9–30 ವರೆಗೆ ತೋಮಾಲಸೇವೆ ಮತ್ತು ಅರ್ಚನೆ
,, 9–30 ರಿಂದ 10–00 ವರೆಗೆ ಬಲಿ, ಶಾತ್ತುಮೊರೆ
,, 10–00 ರಿಂದ ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ಏಕಾಂತಸೇವೆ

---

ಗಮನಿಕೆ :– 1. ಮೇಲಿನ ಕಾರ್ಯಕ್ರಮಗಳು ಸಮಯಾನುಕೂಲವಾಗಿಯೂ ಪ್ರತ್ಯೇಕ ಕಾರ್ಯಕ್ರಮಗಳಿಂದಲೂ ಬದಲಾಯಿಸಲ್ಪಡಬಹುದು.

2. ತೋಮಾಲಸೇವೆಯಲ್ಲಿ ಒಬ್ಬರಿಗೆ 50/– ರೂ ಟಿಕೆಟ್, ಅರ್ಚನೆಯಲ್ಲಿ ಒಬ್ಬರಿಗೆ 100/– ರೂ ಟಿಕೆಟ್ ಏಕಾಂತಸೇವೆಯಲ್ಲಿ ಒಬ್ಬರಿಗೆ 50/– ರೂ ಟಿಕೆಟ್, ಪಡೆದಲ್ಲಿ ಪ್ರವೇಶಾವಕಾಶವುಂಟು.

3. ಸರ್ಕಾರ್ ಕಲ್ಯಾಣೋತ್ಸವ, ಅರ್ಜಿತ ಬ್ರಹ್ಮೋತ್ಸವ, ಊಂಜಲ್‌ಸೇವೆ, ವಾಹನ ಸೇವೆಗಳು, ಡೋಲೋತ್ಸವ, ಪ್ಲವೋತ್ಸವ ಮಂಗಳವಾರದಲ್ಲಿ ಮಧ್ಯಾಹ್ನ 1–00 ರಿಂದ 7–00 ನಡುವೆ ಜರುಗುವುವು.



ಎನ್ನ ಬಿಟ್ಟು ನೀನಗಲದಿರು ಶ್ರೀನಿವಾಸ ॥ ಪ ॥
ನಿನ್ನ ನಂಬಿದ ದಾಸನಲ್ಲವೇನೋ ॥ ಅ.ಪ ॥

ತನುವೆಂಬೊ ಮಂಟಪದಿ
ಮನವೆಂಬೊ ಹಸೆಮಂಚ ।
ಘನವಾದ ಸುಜ್ಞಾನ ದೀಪದ ಬೆಳಕಿನಲ್ಲಿ
ಸನಕಾದಿ ವಂದ್ಯ ನೀ ಬೇಗ ಬಾರೋ ॥ ೧ ॥

ಪಂಚರಿವರು ಯಾವಾಗಲೂ
ಹೊಂಚುಹಾಕಿ ಎನ್ನನು ನೋಡುತಾರೆ ।
ಕೊಂಚಗಾರರು ಆರುಮಂದಿ ಅವರು
ಹಿಂಚು ಮುಂಚಿಲ್ಲದೆ ಎಳೆಯುತಾರೆ ॥ ೨ ॥

ಮುನ್ನ ಮಾಡಿದ ದುಷ್ಕರ್ಮದಿ ಬಳಲಿದೆ
ಇನ್ನಾದರು ನೀನೆನ್ನ ಕಾಯೋ ।
ಘನ್ನ ಮಹಿಮ ಶ್ರೀಪುರಂದರವಿಠಲ
ಮನ್ನಿಸಿ ಮಮತೆ ಎನ್ನಲ್ಲಿ ತೋರೋ ॥ ೩ ॥

—ಪುರಂದರದಾಸರು



ಗೌರವ ಸಂಪಾದಕರು.
ಶ್ರೀ ಪಿ. ವಿ. ಆರ್. ಕೆ. ಪ್ರಸಾದ್, ಐ.ಎ.ಎಸ್.,

ಸಂಪಾದಕ:
ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ:
ಬಿ. ಎನ್. ಶ್ರೀನಿವಾಸನ್ ಎಂ.ಎ.,

ಮುದ್ರಣ.
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ,
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**



ಸಂಪುಟ ೧೩] ಜುಲೈ ೧೯೮೨ [ಸಂಚಿಕೆ ೨

# ವಿಷಯಸೂಚಿ

# ವಾರ್ತಾಲಹರಿ

## ಹರಿಜನ ಸೇವಾ ಶಿಕ್ಷಣ ಶಿಬಿರ

ತಿರುಪತಿಯ ಶ್ರೀ ವೆಂಕಟೇಶ್ವರ ಬಾಲಮಂದಿರದಲ್ಲಿ ದಿನಾಂಕ 21–5–82 ರಿಂದ 4–6–82 ವರೆಗೆ ಹರಿಜನ ಸೇವಾ ಶಿಕ್ಷಣ ಶಿಬಿರವು ಸರಳವಾಗಿಯೂ ಸಫಲವಾಗಿಯೂ ನಡೆಯಿತು

21–5–82 ರ ಸಂಜೆ ಆಂಧ್ರಪ್ರದೇಶದ ಎಲ್ಲ ಜಿಲ್ಲೆಗಳಿಂದ ಕೂಡಿ ಬಂದ 100 ಮಂದಿ ವಿದ್ಯಾರ್ಥಿಗಳ ಶಿಬಿರವು ತಿ ತಿ. ದೇ. ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ ಸುಬ್ಬರಾಯುಲು ಅವರ ಅಧ್ಯಕ್ಷತೆಯಲ್ಲಿ ಏರ್ಪಡಿಸಿ ವ್ಯಾಸಾಶ್ರಮದ ಶ್ರೀ ಶ್ರೀ ವಿದ್ಯಾನಂದಗಿರಿ ಸ್ವಾಮಿಯವರಿಂದ ಆರಂಭವಾಯಿತು. ಹಿಂದೂ ಧರ್ಮರಕ್ಷಣ ಸಂಸ್ಥೆಯ ಶ್ರೀ ಸಮುದ್ರಾಲ ಲಕ್ಷ್ಮಣಯ್ಯ ಅವರಿಂದ ಸ್ವಾಗತಿಸಲ್ಪಟ್ಟ ಸಭೆಯಲ್ಲಿ ಶಿಬಿರದ ವೈಶಿಷ್ಟ್ಯವನ್ನು ಕುರಿತು ಪೌರಸಂಬಂಧಾಧಿಕಾರಿ ಶ್ರೀ ರಾವುಲ ಸೂರ್ಯನಾರಾಯಣಮೂರ್ತಿ ಅವರು ಮಾತನಾಡಿದರು.

ಹದಿನೈದು ದಿನಗಳ ಈ ಶಿಕ್ಷಣ ಶಿಬಿರ ಇತರ ಶಿಕ್ಷಣಶಿಬಿರ, ಸಮ್ಮೇಳನಗಳಿಗಿಂತ ಬೇರೆಯಾಗಿದ್ದು, ಹರಿಜನರು ಹೇಗೆ ಧಾರ್ಮಿಕವಾಗಿ ಹಿಂದೂ ಧರ್ಮದ ಚೌಕಟ್ಟಿನೊಳಗೇ ಇದ್ದು ಸಾಮಾಜಿಕ ಅಭಿವೃದ್ಧಿ ಹೊಂದಬಹುದೆಂಬುದನ್ನು ತಿಳಿಸಿಕೊಡಲಾಯಿತು. ಹರಿಜನರ ಮುಖ್ಯ ಸಮಸ್ಯೆಯಾದ ಅಸ್ಪೃಶ್ಯತೆಯನ್ನು ಭಾರತೀಯ ಸಂವಿಧಾನವೂ, ಹಿಂದೂ ಧರ್ಮ ಪೀಠಾಧಿಪತಿಗಳೂ ಅಲ್ಲಗಳೆದಿರುವುದನ್ನು ಶಿಬಿರಾರ್ಥಿಗಳಿಗೆ ವಿವರಿಸಿ ಹಾಗೂ ಅವರೆಲ್ಲ ಸಮಾಜದಲ್ಲಿ ಸ್ವಾಭಿಮಾನಾತ್ಮಕವಾಗಿ ಬಾಳಲು ತಕ್ಕ ಸಹೃದಯತೆಯನ್ನು ಏರ್ಪಡಿಸಲು ಶ್ರಮಿಸಲಾಯಿತು. ದೇಶದ ನಾನಾ ಕಡೆಗಳಿಂದ ಆಗಮಿಸಿದ ವಿದ್ವಾಂಸರು ಹಿರಿಯರು ಶಿಬಿರಾರ್ಥಿಗಳಿಗೆ ಮಾನಸಿಕ, ಶೈಕ್ಷಣಿಕ, ಸಾಮಾಜಿಕ, ಧಾರ್ಮಿಕ, ರೀತಿ ನೀತಿಗಳಿಗೆ ಸಂಬಂಧಿಸಿದಂತೆ ತರಬೇತಿ ನೀಡಿದರು.

ಪ್ರತಿದಿನವೂ ಬೆಳಗ್ಗೆ ಐದುಗಂಟೆಯಿಂದ ರಾತ್ರಿ 10ರ ವರೆಗೆ ವ್ಯಾಪಿಸಿದ ಈ ಶಿಕ್ಷಣ ಶಿಬಿರದಲ್ಲಿ ವಿದ್ಯಾರ್ಥಿಗಳಿಗೆ ಪ್ರಾರ್ಥನೆ, ಸೂರ್ಯನಮಸ್ಕಾರ ಸರಳ ಯೋಗಾಭ್ಯಾಸಗಳನ್ನೂ, ಸ್ವತಃ ಪೂಜೋಪಚಾರಗಳನ್ನು ಆಚರಿಸಲು ಬೇಕಾದ ಪರಿಚಯ ಪರಿಕರಗಳನ್ನೂ ತಿಳಿಸಿಕೊಟ್ಟು, ವಿವಾಹಾದಿ



ಕರ್ನಾಟಕದಿಂದ ನೀಡಲಾದ ಧ್ವಜಸ್ತಂಭವನ್ನು ತಿರುಮಲೆಯ ಶ್ರೀವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ಶಾಸ್ತ್ರೋಕ್ತವಾಗಿ ಮೇ 19 ರಂದು ಪ್ರತಿಷ್ಠಾಪಿಸಲಾಯಿತು. ಪ್ರತಿಷ್ಠಾಪನೆಯಲ್ಲಿನ ಒಂದು ದೃಶ್ಯದಲ್ಲಿ ತಿ ತಿ. ದೇವಸ್ಥಾನದ ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ-ಪಿ ಆರ್.ಕೆ ಪ್ರಸಾದ್, ದೇವಾದಾಯ ಇಲಾಖಾ ಮಂತ್ರಿ ಶ್ರೀ ಪಿ ವಿ ಚೌದರಿ ಹಾಗೂ ಮತ್ತಿತರರು. ತತ್ಸಂಬಂಧದಲ್ಲಿ ಒಂದು ವಿಶೇಷ ಬ್ರಹ್ಮೋತ್ಸವವನ್ನು ಜೂನ್ 10 ರಿಂದ 15ರ ವರೆಗೆ ನಡೆಸಲಾಯಿತು



ಹರಿಜನ ಶಿಕ್ಷಣ ಶಿಬಿರದ ಉದ್ಘಾಟನಾ ದೃಶ್ಯ ತಿ ತಿ. ದೇ. ಸಹಕಾರ್ಯ ನಿರ್ವಹಣಾಧಿಕಾರಿ ಶ್ರೀ ಡಿ. ಸುಬ್ಬರಾಯುಲು, ಶ್ರೀ ಶ್ರೀ ವಿದ್ಯಾನಂದಗಿರಿಸ್ವಾಮಿ, ಮತ್ತಿತರರನ್ನು ಕಾಣಬಹುದು.

ಕಾರ್ಯಗಳಲ್ಲಿನ ಧಾರ್ಮಿಕ ವಿಧಿಗಳನ್ನೂ ಪರಿಚಯಿಸಲಾಯಿತು.

ಶಿಬಿರದ ವೈಶಿಷ್ಟ್ಯಗಳಲ್ಲಿ ಮತ್ತೊಂದು ಎನ್ನಬಹುದಾದ ಅಂಶವೆಂದರೆ ಆಕ್ಷಿಗ ಇತಿಹಾಸ ಪರಿಚಯ ಪಾಠಗಳು. ಬುದ್ಧ, ಬಸವ, ಗಾಂಧಿ ಮೊದಲಾದವರ ಹಾಗೂ ಶೈವ, ವೈಷ್ಣವ, ಮೊದಲಾದ ಪಂಥಗಳ ಪರಿಚಯ ಮಾಡಿಕೊಟ್ಟು ಭಕ್ತಿ ಸಂಪ್ರದಾಯ, ಧಾರ್ಮಿಕ ಜಾಗೃತಿಗಳನ್ನು ವಿವರಿಸಿ ಹಿಂದೂಧರ್ಮದ ಔನ್ನತ್ಯವನ್ನೂ ವೈಶಾಲ್ಯವನ್ನೂ ಪಂಡಿತರು ದಿನವೂ ಶಿಬಿರಾರ್ಥಿಗಳಿಗೆ ತಿಳಿಸಿದರು.

ವಿಶ್ವಹಿಂದೂ ಪರಿಷತ್‌ನ ದಕ್ಷಿಣಭಾರತೀಯ ಶಾಖೆಯಿಂದ ಯೋಜಿತವಾದ ಈ ಶಿಕ್ಷಣ ಶಿಬಿರದ ವಿದ್ಯಾರ್ಥಿಗಳಿಗೆ ತಿ.ತಿ ದೇ. ವತಿಯಿಂದ ಉಚಿತ ವಸತಿ, ಊಟ, ಪ್ರಯಾಣಗಳನ್ನು ಕಲ್ಪಿಸಲಾಗಿದ್ದಿತು.

## ಅನ್ನಮಾಚಾರ್ಯ ಜಯಂತಿ ಉತ್ಸವಗಳು

ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರದಲ್ಲಿ ಮೇ ತಿಂಗಳ 8 ನೇ ತಾರೀಖಿನಿಂದ 10 ರ ವರೆಗೆ ಅನ್ನಮಾಚಾರ್ಯರ 574 ನೇ ಜಯಂತಿ ಉತ್ಸವಗಳು ಸರಳ ಸುಂದರವಾಗಿ ನಡೆದವು.

ಮೇ 8 ರ ಬೆಳಗ್ಗೆ ಅನ್ನಮಯ್ಯ ಹಾಗೂ ಶ್ರೀ ವೆಂಕಟೇಶ್ವರಸ್ವಾಮಿಯವರ ತೈಲಚಿತ್ರಗಳ ಮೆರವಣಿಗೆ ವೈಭವದಿಂದ ನಡೆಯಿತು. ಜಯಂತಿ ಕಾರ್ಯಕ್ರಮವನ್ನು ತಿ. ತಿ. ದೇ. ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ ಸುಬ್ಬರಾಯುಲು ಅವರು ಉದ್ಘಾಟಿಸಿದರು. ಮುಖ್ಯ ಅತಿಥಿಯಾಗಿ ಭಾಗವಹಿಸಿದ ಖ್ಯಾತ ಗಾಯಕ ಪಿ ಬಿ. ಶ್ರೀನಿವಾಸ್ ಅವರು ಅನ್ನಮಯ್ಯ ಸಂಕೀರ್ತನೆಗಳಲ್ಲಿ ಕೆಲವನ್ನು ಹಾಡಿ ತಾವು ರಚಿಸಿದ ಕೀರ್ತನೆಯನ್ನು ಅನ್ನಮಯ್ಯನಿಗೆ ಅರ್ಪಿಸಿದರು. ವಿಶೇಷಾಧಿಕಾರಿ ಕಾಮಿಶೆಟ್ಟಿ ಶ್ರೀನಿವಾಸುಲು ಶೆಟ್ಟಿ ಅವರು ರಚಿಸಿದ 'ಅನ್ನಮಾಚಾರ್ಯುಲು' ಪುಸ್ತಕವನ್ನು ಶ್ರೀ ಡಿ. ಸುಬ್ಬರಾಯುಲು ಅವರು ಬಿಡುಗಡೆ ಮಾಡಿದರು. ಆಂಧ್ರಪ್ರಭ ವಾರಪತ್ರಿಕೆಯ ಸಂಪಾದಕ ಶ್ರೀ ಪಿ. ವೆಂಕಟೇಶ್ವರರಾವ್ ಅವರೂ ಮಾತನಾಡಿದ ಸಭೆಯಲ್ಲಿ ಅನ್ನಮಯ್ಯ ಸಂಕೀರ್ತನಾ ಗಾಯನ ಸ್ಪರ್ಧೆಯ ವಿಜೇತರಿಗೆ ಬಹುಮಾನ ವಿನಿಯೋಗವಾಯಿತು ನಂತರದ ಛಾಯಾಸಂಗೀತರೂಪಕ 'ಅನ್ನಮಯ್ಯ ಕಥ' ಪ್ರೇಕ್ಷಕರನ್ನು ವಿಶೇಷವಾಗಿ ಆಕರ್ಷಿಸಿತು.

9 ರ ಸಂಜೆ ಭಾಷಾಸಾಹಿತ್ಯ ಸದಸ್ ಕಾರ್ಯಕ್ರಮ ನಡೆಯಿತು. ಅಧ್ಯಕ್ಷ ಪೀಠದಿಂದ ಮಾತನಾಡಿದ ಸರಸ್ವತೀಪುತ್ರ ಪುಟ್ಟಪರ್ತಿ ನಾರಾಯಣಾಚಾರ್ಯರು ಅನ್ನಮಯ್ಯನ ಕವಿತೆಯ ಮೇಲೆ ಶ್ರೀಪಾದರಾಯರ ಪ್ರಭಾವವಿರುವುದಾಗಿ ತಾವು ಭಾವಿಸುವುದಾಗಿ ತಿಳಿಸುತ್ತ ಅನ್ನಮಯ್ಯನ ಶ್ರೇಷ್ಠತೆಯನ್ನು ಕೊಂಡಾಡಿದರು ಸರ್ವಶ್ರೀ ವೇಟೂರಿ ಆನಂದಮೂರ್ತಿ, ಅವಧಾನಂ ಚಂದ್ರಶೇಖರ ಶರ್ಮ, ಯಲ್ಲಂರಾಜು ಶ್ರೀನಿವಾಸರಾವು, ಪಿ. ವೆಂಕಟೇಶ್ವರರಾವ್ ಅವರುಗಳು ಸದಸ್‌ನಲ್ಲಿ ಭಾಗವಹಿಸಿದರು. ಉಪನ್ಯಾಸಕರನ್ನು ಶ್ರೀ ಬಿ. ರಜನೀಕಾಂತರಾವ್ ಅವರು ಸನ್ಮಾನಿಸಿದರು ಅನ್ನಮಾಚಾರ್ಯ ಪದಕೋಶ ನಿರ್ಮಾಣ ನಡೆಯುತ್ತಿದೆಯೆಂದು ಶ್ರೀ ಕಾಮಿಶೆಟ್ಟಿಯವರು ತಿಳಿಸಿದರು.

ನಂತರ ಶ್ರೀ ಮೇಡಸಾನಿ ಮೋಹನ್ ಅವರ ಅಷ್ಟಾವಧಾನ ಕಾರ್ಯಕ್ರಮ ಸಭಿಕರನ್ನು ರಂಜಿಸಿತು ಪೃಚ್ಛಕರಾಗಿ ಸರ್ವಶ್ರೀ ಕಾಟ್ರಪಾಟಿ ಸುಬ್ಬಾರಾವ್ (ಆಶು) ಸರ್ವೋತ್ತಮುಸ್ (ನಿಷೇಧಾಕ್ಷರಿ) ದಾಮೋದರಶಾಸ್ತ್ರಿ (ಅಪ್ರಸ್ತುತ ಪ್ರಶಂಸೆ) ಭಾಸ್ಕರ ನಾಯುಡು (ಪುರಾಣಪಠನೆ) ಜಿ ಮುನಿರತ್ನಂ (ದತ್ತಪದಿ) ಬಾಲಸುಬ್ರಹ್ಮಣ್ಯಂ (ವರ್ಣನೆ) ಕೆ ರಾಮಕೃಷ್ಣ (ಗಂಟೆ) ಅವರುಗಳು ವ್ಯವಹರಿಸಿದರು.

10ನೇ ತಾರೀಖು ಅನ್ನಮಯ್ಯ ಸಂಗೀತ ಕಛೇರಿ ನಡೆಯಿತು. ಶ್ರೀ ಬಾಲಕೃಷ್ಣ ಪ್ರಸಾದ್ ಅವರು ತಮ್ಮ ವೃಂದದೊಡನೆ ಅನ್ನಮಾಚಾರ್ಯ ಸಂಕೀರ್ತನಾ ಸುಧೆಯನ್ನು ಬಡಿಸಿದರು. ಶ್ರೀ ಅಮ್ಮುಲ ವಿಶ್ವನಾಥಭಾಗವತರ್ ಅವರು 'ಅನ್ನಮಾಚಾರ್ಯ' ಹರಿಕಥೆ ಮಾಡಿದರು.

## ಆನಿವರ ಆಸ್ಥಾನ

1982 – ಜುಲೈ – 16

ತಿರುಮಲೆಯ ಶ್ರೀವೆಂಕಟೇಶ್ವರ ಸ್ವಾಮಿ ದೇವಾಲಯದಲ್ಲಿ ಜುಲೈ 16 ರಂದು ನಡೆಯುವ ಆನಿವರ ಆಸ್ಥಾನದ ಪ್ರಯುಕ್ತ 1982 ರ ಜುಲೈ 13 ರಂದು ಕೋಯಿಲ್ ಆಳ್ವಾರ್ ತಿರುಮಂಜನವು ನಡೆಯಲಿದ್ದು ಅಂದು ಸರ್ವದರ್ಶನವು ಮಧ್ಯಾಹ್ನ 1 ಗಂಟೆಯ ಹೊತ್ತಿಗೆ ಆರಂಭವಾಗುವುದು 12–7–82 ರ ರಾತ್ರಿ ಏಕಾಂತಸೇವೆಯ ನಂತರದಲ್ಲಿ ಕಲ್ಯಾಣೋತ್ಸವ, ಬ್ರಹ್ಮೋತ್ಸವ, ವಾಹನಸೇವೆಗಳು, ಉಂಜಲ್‌ಸೇವೆ, ವಸಂತೋತ್ಸವ, ತೆಪ್ಪೋತ್ಸವ, ಆಮಂತ್ರಣೋತ್ಸವ ಇತ್ಯಾದಿ ಆರ್ಜಿತ ಸೇವೆಗಳನ್ನು ಮನ್ನಾ ಮಾಡಲಾಗಿದೆ. ಆದರೆ ಗೃಹಸ್ಥರು ರೂ. 3000 ಶುಲ್ಕದಿಂದ ಕೋಯಿಲ್ ಆಳ್ವಾರ್‌ತಿರುಮಂಜನದಲ್ಲಿ ಭಾಗವಹಿಸಬಹುದು.

ಜುಲೈ 16 ರಂದು ನಡೆಯುವ ಆನಿವರ ಆಸ್ಥಾನದ ಪ್ರಯುಕ್ತ 15–7–82 ರ ರಾತ್ರಿಯ ಏಕಾಂತ ಸೇವೆಯ ನಂತರ ಸಹಸ್ರಕಲಶಾಭಿಷೇಕ, ಕಲ್ಯಾಣೋತ್ಸವ, ವಾಹನಸೇವೆಗಳು ಉಂಜಲ್‌ಸೇವೆ, ವಸಂತೋತ್ಸವ, ಮೊದಲಾದ ಆರ್ಜಿತ ಸೇವೆಗಳನ್ನು ಮನ್ನಾ ಮಾಡಲಾಗಿದೆ. ಆದರೆ ಪಡಿ ಪ್ರಸಾದಗಳ ಸೇವೆಯನ್ನು ಮಾಡಬಹುದು. ಸ್ನಪನ, ತಿರುಮಂಜನ, ಊಂಜಲ್‌ಸೇವೆ ಮೊದಲಾದವು ವೈಭವದಿಂದ ವಸಂತಮಂಟಪದಲ್ಲಿ ನಡೆಯುತ್ತವೆ.

( 37ನೇ ಪುಟ ನೋಡಿ )

## ಆಗಸ್ಟ್ ತಿಂಗಳ ಮುಖ್ಯ ದಿನಗಳು

| | | |
|---|---|---|
| 2. | ಸೋಮವಾರ : | ತಿರುಮಲೆಯಲ್ಲಿ ಪವಿತ್ರೋತ್ಸವ ಸಮಾಪ್ತಿ |
| 4. | ಬುಧವಾರ : | ಯಜುರುಪಾಕರ್ಮ, ವಿಖಾನಸ ಜಯಂತಿ |
| 5. | ಗುರುವಾರ : | ಗಾಯತ್ರಿ ಜಪ |
| 12. | ಗುರುವಾರ : | ಗೋಕುಲಾಷ್ಟಮಿ |
| 15. | ಭಾನುವಾರ : | ಸ್ವಾತಂತ್ರ್ಯೋತ್ಸವ |
| 21. | ಶನಿವಾರ : | ವರಾಹ ಜಯಂತಿ |
| 22. | ಭಾನುವಾರ . | ವಿನಾಯಕ ಚತುರ್ಥಿ |
| 23. | ಸೋಮವಾರ : | ಋಷಿಪಂಚಮಿ |
| 31. | ಮಂಗಳವಾರ : | ವಾಮನ ಜಯಂತಿ. |

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ

ಕರ್ಣಾಟಕ ರಾಷ್ಟ್ರದಿಂದ ಶ್ರೀ ವೆಂಕಟೇಶ್ವರಸ್ವಾಮಿಯನ್ನು ಸೇವಿಸಬೇಕೆಂದು ಬರುವ ಯಾತ್ರಿಕರಿಗೆ 'ಗೋವಿಂದರಾಜ ಪಟ್ಟಣ' ಸುಪರಿಚಿತವಾದ ಹೆಸರು. ಪ್ರಾಚೀನಕಾಲದಲ್ಲಿ ಎಲ್ಲ ವಿದ್ಯೆಗಳಿಗೂ ದೇವಸ್ಥಾನವೇ ಪ್ರಧಾನ ಕೇಂದ್ರ. ಆದ್ದರಿಂದ ದೇವಸ್ಥಾನದ ಸುತ್ತೂ ಊರು ವಿಸ್ತೃತವಾಯಿತು. ಆ ಕಾರಣದಿಂದ ತಿರುಪತಿಗೆ 'ಗೋವಿಂದರಾಜ ಪಟ್ಟಣ' ಎನ್ನುವ ಹೆಸರು ಪ್ರಸಿದ್ಧವಾಯಿತು.

'ಗೋವಿಂದರಾಜ'ನು ಯಾರು ಎನ್ನುವದು ಕುತೂಹಲಕಾರೀ ಪ್ರಶ್ನೆ. ಗೋವಿಂದರಾಜಮೂರ್ತಿ ಶಯನ ಭಂಗಿಯಲ್ಲಿ ದರ್ಶನ ಕೊಡುತ್ತಾನೆ ವಿಷ್ಣುವಿನ ಅರ್ಚಾವತಾರ ಮೂರ್ತಿಗಳಲ್ಲಿ ರಂಗನಾಥನೊಬ್ಬನೇ ಈ ರೀತಿ ಕಾಣುತ್ತಾನೆ. (ಚಿತ್ತೂರು ಜಿಲ್ಲಾ ಸತ್ಯವೇಡು ತಾಲ್ಲೂಕಿನ 'ಸುರುಟುಪಲ್ಲಿ'ಯಲ್ಲಿ ಶಿವನು ಶಯನ ಭಂಗಿಯಲ್ಲಿ ಸಾಕ್ಷಾತ್ಕರಿಸಿದ್ದಾನೆ.) ಗೋವಿಂದರಾಜನ ಶಯನಭಂಗಿಗೆ ಐತಿಹ್ಯ ಉಂಟು.

ಶ್ರೀನಿವಾಸನಿಗೆ ಲಗ್ನ ನಿಶ್ಚಯವಾಯಿತು. ವಿವಾಹವೆಂದರೆ ಎಷ್ಟೋ ವೆಚ್ಚಗಳಿರುತ್ತವೆ. ಶ್ರೀನಿವಾಸನಿಗೆ ಹಣ ಬೇಕಾಯಿತು. ಕುಬೇರನು ಹಣ ಕೊಡಲಿಕ್ಕೆ ಸಿದ್ಧನಾದ. ರಾಮಮುದ್ರಾಂಕಿತವಾದ ಹದಿನಾಲ್ಕು ಲಕ್ಷ ನಾಣ್ಯಗಳನ್ನು ಬಡ್ಡಿಗೆ ಕುಬೇರನು ಕೊಟ್ಟ. ಕಲಿಯುಗಾಂತ್ಯವರಗೆ ಬಡ್ಡಿ ಕೊಡಬೇಕೆಂದೂ ಆ ಮೇಲೆ ಅಸಲು ತೀರಿಸಬೇಕೆಂದೂ ನಿಶ್ಚಯವಾಯಿತು. ಶ್ರೀನಿವಾಸನು ಭಕ್ತರಿಗೆ ವರಗಳು ಕೊಟ್ಟು ಕಾಣಿಕೆರೂಪವಾಗಿ ಹಣ ವಸೂಲುಮಾಡಿ ಬಡ್ಡಿ ನೀಡುತ್ತಿದ್ದಾನೆ. ಆ ಹಣವನ್ನು ಗೋವಿಂದರಾಜನು ಕೊಳಗದಿಂದ ಅಳೆದು ಅಳೆದು ಆಯಾಸದಿಂದ ಮಲಗಿದ್ದಾನೆಂದು ಅರ್ಚಕರು ಹೇಳುತ್ತಾರೆ.

ಗೋವಿಂದರಾಜನಿಗೂ ಶ್ರೀನಿವಾಸನಿಗೂ ಭೇದವಿಲ್ಲ. ಗೋವಿಂದರಾಜನಿಗೆ ಆದಿಶೇಷನು



ಕೊಡೆಯಾಗಿದ್ದಾನೆ. ಹೊಕ್ಕುಳಲ್ಲಿ ಬ್ರಹ್ಮದೇವನು, ಪಾದಗಳ ಸಮೀಪದಲ್ಲಿ ಶ್ರೀದೇವಿ ಭೂದೇವಿಯರು. ಮತ್ತು ಮಧುಕೈಟಭರಾಕ್ಷಸರು ನಿಂತಿದ್ದಾರೆ. ಈ ಮೂರ್ತಿಗಳು ಶಿಲಾವಿಗ್ರಹಗಳಲ್ಲ. ಅವೆಲ್ಲವೂ ಸುಧಾವಿಗ್ರಹಗಳೇ. ಗೋವಿಂದರಾಜನ ಪತ್ನಿ ಗೋದಾದೇವಿ. ಆ ತಾಯಿಗೆ 'ಶೂಡಿಕೊಡುತ್ತ ನಾಚ್ಚಿಯಾರ್' ಎಂಬ ಹೆಸರು ಉಂಟು. ಗೋವಿಂದರಾಜನ ಗರ್ಭಗುಡಿಯಲ್ಲಿ ಭೋಗ ಶ್ರೀನಿವಾಸನ ಉತ್ಸವ ವಿಗ್ರಹ ರಮಣೀಯವಾಗಿದೆ. ಗೋದಾದೇವಿ ಗರ್ಭಗುಡಿಯಲ್ಲಿ 'ವೇಣು ಗೋಪಾಲನ ಉತ್ಸವ ಮೂರ್ತಿ'ಯನ್ನು ನೋಡಬಹುದು ಈ ದೇವಸ್ಥಾನದಲ್ಲಿ ತಿರುಪ್ಪಾಣಾಳ್ವಾರ್ ಸನ್ನಿಧಿ ಯಿಲ್ಲ. ತಿರುಮಂಗೈ ಆಳ್ವಾರ್, ಕುಲಶೇಖರ ಆಳ್ವಾರ್, ತೊಂಡರಡಿಪ್ಪೊಡಿ ಆಳ್ವಾರ್, ಪೆರಿಯಾಳ್ವಾರ್, ಪೊಯ್‌ಗೈಆಳ್ವಾರ್, ಪೂದತ್ತಾಳ್ವಾರ್, ಪೇಯಾಳ್ವಾರ್, ಕೂರತ್ತಾಳ್ವಾರ್, ನಮ್ಮಾಳ್ವಾರ್ ಸನ್ನಿಧಿಗಳನ್ನು ನೋಡಬಹುದು.

**ಡಾ॥ ಕೆ. ಸರ್ವೋತ್ತಮನ್**

ಮತ್ತು ವೈಷ್ಣವಾಚಾರ್ಯರಲ್ಲಿ ಪ್ರಸಿದ್ಧರಾದ ಮಣವಾಳಮಹಾಮುನಿ, ತಿರುಮಲನಂಬಿ, ಭಾಷ್ಯಕಾರ, ಭಟ್ಟರ ಆಲಯಗಳು ಕಾಣಿಸುತ್ತವೆ. ಈ ದೇವಸ್ಥಾನ ಪ್ರಾಂಗಣದಲ್ಲಿ 'ಪುಂಡರೀಕವಲ್ಲಿ' ತಾಯಾರಿಗೆ ಪ್ರತ್ಯೇಕ ಸನ್ನಿಧಿಯಿದೆ.

ಈ ದೇವಾಲಯ ನಿರ್ಮಾಣವನ್ನು ನೋಡಿದರೆ ಪ್ರಾಚೀನಕಾಲದಲ್ಲಿ ಗೋವಿಂದರಾಜನಿಗೆ ಪ್ರಾಧಾನ್ಯವಿಲ್ಲವೆಂದು ಹೇಳಬೇಕಾಗಿದೆ. ಗೋಪುರಕ್ಕೆ ಎದುರಾಗಿ 'ಪಾರ್ಥಸಾರಥಿ' ಯಿದ್ದಾನೆ. ಎಡಬದಿಯಲ್ಲಿ ರುಕ್ಮಿಣೀಸತ್ಯಭಾಮೆಯರು ಆಸೀನ ಭಂಗಿಯಲ್ಲಿ ಸಾಕ್ಷಾತ್ಕರಿಸುತ್ತಾರೆ. ಪಾರ್ಥಸಾರಥಿಗೆ ಸೇರಿದ ಉತ್ಸವ ಮೂರ್ತಿಗಳೇ ಕಾಲಕ್ರಮದಲ್ಲಿ ಗೋವಿಂದರಾಜನ ಉತ್ಸವಮೂರ್ತಿಗಳಾಗಿ ಬದಲಾವಣೆ ಆದವೆಂದು ಹೇಳುತ್ತಾರೆ. ಗೋವಿಂದರಾಜನ ಗರ್ಭಗುಡಿಯೊಳಗೆ ಶಾಸನಗಳಿಲ್ಲ. ಪಾರ್ಥಸಾರಥಿ ಸನ್ನಿಧಿ ಗೋಡೆಗಳ ಮೇಲೆ ಶಾಸನಗಳು ಕಾಣಿಸುತ್ತವೆ. ಗೋವಿಂದರಾಜನ ವಿಗ್ರಹ ಚಿದಂಬರದಲ್ಲಿ ಇದ್ದಿತಂತೆ. ಆ ಪ್ರದೇಶವನ್ನು ಆಳುವ ಚೋಳರಾಜನು ಶೈವ ಭಕ್ತ. ಅವ

ಹೀಗೆ ವಿಘ್ನ ಪ್ರವೇಶ. ಇದನು ... ಭಿ ಯಲ್ಲಿದ್ದ ಗೋವಿಂದರಾಜನ ವಿಗ್ರಹವನ್ನು ಸಾಗರ ಸಮುದ್ರದಲ್ಲಿ ... ಹಾಕಿಸಿದನಂತೆ. ಆದರೆ ವೈಷ್ಣವರು ಅದನ್ನು ಪ್ರಯಾಸದಿಂದ ತಿರುಪತಿಗೆ ... ಪ್ರತಿಷ್ಠೆ ಮಾಡಿದರಂತೆ. ಐತಿಹ್ಯ ಇದು ಸತ್ಯವೋ ಅಲ್ಲವೋ ತಿಳಿಯದು. ಆದರೆ ಆಲಯದಲ್ಲಿರುವ ಮಂಟಪಕ್ಕೆ 'ತಿಲ್ಲೈಕ್ಕೋವಿಂದರ್‌ತ್ತಾನ್ ಮಂಟಪಂ' ಎಂದು ಹೆಸರು. 'ತಿಲ್ಲೈ' ಎಂದರೆ ಚಿದಂಬರಂ. ಈ ಮಂಟಪಕ್ಕೆ ಕಲ್ಯಾಣ ಮಂಟಪವೆಂದು ಹೆಸರು. ಇಲ್ಲಿ ಶ್ರೀವೆಂಕಟೇಶ್ವರನು ಶ್ರೀದೇವಿ ಭೂದೇವಿ ಸಹಿತವಾಗಿ ದರ್ಶನ ಕೊಡುತ್ತಾನೆ.

ಗೋವಿಂದರಾಜಸ್ವಾಮಿ ಆಲಯವನ್ನು ಸಕ್ಷಿದೇವ ನಾರಾಯಣ ಸು 1129–30ರಲ್ಲಿ ನಿರ್ಮಿಸಿದನು. ಪ್ರಧಾನ ಗೋಪುರವನ್ನು ಕಟ್ಟಿ ಅನಂತರಾಜು ನಿರ್ಮಿಸಿದನು. ಈ ದೇವಸ್ಥಾನಕ್ಕೆ ಪ್ರಾಕಾರವು ಒಂದು. ಆಕೋಟ ಪುರಕ್ಕೆ ಸೇರಿದ 'ಆದಿದೇವನ್ ಶಠಗೋಪ ಜೀಯರ್' ಅವರು ತಿರುಪತಿಯಲ್ಲಿದ್ದು ಸ್ವಾಮಿ ಕೈಂಕರ್ಯವನ್ನು ಮಾಡುತ್ತಾ ಹಿಂದು ಮಂಟಪವನ್ನು ಕಟ್ಟಿಸಿದರು. 'ಉದಯಗಿರಿ ಭಟ್ಟರ್' ಹನುಮದಾಲಯ ಸಮೀಪದಲ್ಲಿ ವಿಠಲೇಶ್ವರ ಮೂರ್ತಿ' ಪ್ರತಿಷ್ಠೆ ಮಾಡಿದರು.

ಗೋವಿಂದರಾಜಸ್ವಾಮಿ ದೇವಸ್ಥಾನ ಪೂಜಾ ಕಾರ್ಯಕ್ರಮಗಳು ವೈಖಾನಸ ಆಗಮ ರೀತಿಯಲ್ಲಿ ನಡೆಯುತ್ತವೆ. ಆಳ್ವಾರ್‌ಗಳ ಕೈಂಕರ್ಯಗಳು ಪಾಂಚರಾತ್ರಾಗಮ ಪದ್ಧತಿಗಳ ಪ್ರಕಾರ ನಡೆಯುತ್ತವೆ. ಗೋವಿಂದರಾಜಸ್ವಾಮಿಗೆ ನಡೆಯುವ ಉತ್ಸವಗಳಲ್ಲಿ 'ಬ್ರಹ್ಮೋತ್ಸವ' ಮುಖ್ಯವಾದದ್ದು. ವೃಷಭಮಾಸದ 'ಅನುರಾಧ' ನಕ್ಷತ್ರ ಪರ್ಯಂತ ಮೊದಲ ಒಂಬತ್ತು ದಿನಗಳು ಬ್ರಹ್ಮೋತ್ಸವ ನಡೆಯುತ್ತದೆ. ಮಾಘ ಶುದ್ಧ ಏಕಾದಶಿಗೆ ಮೊದಲು ಪೂರ್ಣಿಮಾ ತಿಥಿವರೆಗೆ ತೆಪ್ಪೋತ್ಸವ ನಡೆಯುತ್ತದೆ. ಮೀನ ಮಾಸ ಪೂರ್ಣಿಮಾತಿಥಿಯಲ್ಲಿ 'ಪೂಲಂಗಿ' ವೈಭವದಿಂದ ನಡೆಯುತ್ತದೆ.

ಗೋವಿಂದರಾಜಸ್ವಾಮಿ ದೇವಸ್ಥಾನ ಕುಡ್ಯಗಳ ಮೇಲೆ ತಮಿಳುಶಾಸನಗಳು ಹೆಚ್ಚು. ಈ ಸ್ವಾಮಿಯನ್ನು ಹಾಡಿದ ಕವಿಗಳಲ್ಲಿ ತಾಳ್ಳಪಾಕ ಅನ್ನಮಯ್ಯ ಪೆದ ತಿರುಮಲಯ್ಯ ಪ್ರಸಿದ್ಧರು.

# ಆರ್ಜಿತ ತೆಪ್ಪ ಉತ್ಸವ

ಸಾಧಾರಣವಾಗಿ ವರುಷಕ್ಕೊಂದು ಬಾರಿ 3 ದಿನಗಳ ಪರ್ಯಂತ ನಡೆಯುವ ಪ್ಲವೋತ್ಸವವಲ್ಲದೆ, ಭಕ್ತಜನರ ಸೌಕರ್ಯಕ್ಕಾಗಿ ದೇವಸ್ಥಾನದವರಿಂದ ಏರ್ಪಡಿಸಲ್ಪಟ್ಟ ಆರ್ಜಿತೋತ್ಸವ, ಈ ಪ್ಲವೋತ್ಸವ.

ಪ್ರತಿ ಮಂಗಳವಾರದಲ್ಲಿ, ಆರ್ಜಿತಸೇವೆಗಳನಂತರ, ಮಲಯಪ್ಪಸ್ವಾಮಿಯವರನ್ನು ದೇವೇರಿಗಳನ್ನು ಅಲಂಕರಿಸಿ, ಮಂಗಳ ವಾದ್ಯನಾದ, ವೇದಪ್ರಬಂಧ ಪಠನಾದಿಗಳ ನಡುವೆ ಅವರನ್ನು ಅಲಂಕೃತವಾದ ತೆಪ್ಪದ ಮೇಲೆ ಕುಳ್ಳಿರಿಸಿ, ಸ್ವಾಮಿ ಪುಷ್ಕರಿಣಿಯಲ್ಲಿ 3 ಪರ್ಯಾಯ ವಿಹಾರಯಾತ್ರೆ ಮಾಡಿಸುತ್ತಾರೆ.

ಈ ಮೂರು ಪ್ರದಕ್ಷಿಣೆಗಳ ಅನಂತರ ನಿವೇದನ; ಮಂಗಳ ನೀರಾಜನ ನಡೆದು ಸ್ವಾಮಿಯವರು ದೇವೇರಿಗಳು ವಿವಿಧ ಮರ್ಯಾದೆಗಳೊಡನೆ ಆಲಯ ಪ್ರವೇಶ ಮಾಡುತ್ತಾರೆ.

ರೂ. 2500 ಸಲ್ಲಿಸಿದ ಗೃಹಸ್ಥರು ಈ ಸೇವೆ ಮಾಡಿಸಿ, ಸ್ವಾಮಿಯವರ ಪುಷ್ಕರಿಣೀ ವಿಹಾರವನ್ನು ಮೆಟ್ಟಲ ಮೇಲಿದ್ದು ನೋಡಬಹುದು. ಗೃಹಸ್ಥರಿಗೆ ವಸ್ತ್ರ ಬಹುಮಾನ, ಪ್ರಸಾದವಿನಿಯೋಗಗಳಲ್ಲದೆ, ಸ್ವಾಮಿಯವರ ಆಕೃತಿವುಳ್ಳ 5 ಗ್ರಾಂ ತೂಕದ ಬಂಗಾರದ ಪದಕ ಕೊಡಲ್ಪಡುತ್ತದೆ, ಅವರಿಗೆ ಸಂಬಂಧಿಸಿದ 10 ಜನರನ್ನು ದರ್ಶನಕ್ಕೆ ಅನುಮತಿಸಲಾಗುತ್ತದೆ.

ತಿರುಮಲೆ ತಿರುಪತಿ ದೇವಸ್ಥಾನ.

ವೇಂಕಟಗಿರಿ ಗೋವಿಂದುಡಾ
ಯಿಂಕಾ ನೊಕರೋ ಯಿದ್ದರೋ ವಿಾರು

ನಿಲುಚುಂಡುಟಯುನು ಕೆರಿ ಪವಳಿಂಪುಜು
ನಲರುಟಯುನು ವಿಾರಟುನಿಟುನು

ತಿರುವೇಂಕಟಗಿರಿ ದಿಗುವತಿರುಪತಿನಿ
ಪರಮಾನಂದಪು ಬಹುಸಿರುಲ
ಅರುದುಗ ವೊಂದುಜು ಅಧಿಕಮುಲಂದುಜು
ಉರಗಶಯನುಡವೊ ವೊಡಯುಡವೊ 2-28

ವೆಂಕಗಿರಿಯಲ್ಲಿದ್ದ ಸ್ವಾಮಿ ತಿರುಪತಿಯಲ್ಲಿದ್ದ ಸ್ವಾಮಿ ಭಿನ್ನ ಮೂರ್ತಿಗಳೇ? ಒಂದೇ ಮೂರ್ತಿವಿಶೇಷವೇ? ವೇಂಕಟಯಲ್ಲಿ ನಿಂತಿದ್ದಾನೆ. ಎರಡು ಸ್ಥಲಗಳಲ್ಲಿಯೂ ಅಂಗರಂಗ ಭೋಗಗಳನ್ನು ಅನುಭವಿಸಿ ಆನಂದವಾಗಿದ್ದಾನೆ. 'ನೀನು ಹಾವಿನ ಮೇಲೆ ಶಯನಭಂಗಿಯಲ್ಲಿದ್ದ ಮೂರ್ತಿ ವಿಶೇಷವೇ? ಇಲ್ಲವೆ ಎಲ್ಲರಿಗೂ ಅಧಿಪತಿಯಾದ ದೇವಾಧಿನಾಥನೇ?' ಎಂದು ಕೇಳಿದ್ದಾರೆ ಅನ್ನಮಯ್ಯ.

★

ವಿಷಯ ಸಂಗ್ರಹಣಕ್ಕೆ ಪ್ರತ್ಯೇಕ ಅನುಮತಿ ಕೊಟ್ಟ ಗೋವಿಂದರಾಜಸ್ವಾಮಿ ದೇವಸ್ಥಾನದ ಅಧಿಕಾರಿಗಳಿಗೆ ಕೃತಜ್ಞತೆಗಳು.

# ಹೊಳೆನರಸೀಪುರ

ಸಹ್ಯಪರ್ವತಕ್ಕೆ ಪೂರ್ವವಾಗಿ, ಯದುಗಿರಿಗೆ ಪಶ್ಚಿಮವಾಗಿ ಕಾವೇರಿ ನದಿಗೆ ಉತ್ತರವಾಗಿ, ಹೇಮಾವತಿನದಿಗೆ ದಕ್ಷಿಣವಾಗಿ ಶ್ರೀ ನರಸಿಂಹ ಸ್ವಾಮಿಯ ದಿವ್ಯಕ್ಷೇತ್ರವಿದೆ ದೊಡ್ಡದೇವರಾಜ ಒಡೆಯರ ಕಾಲದಲ್ಲಿ ಮೈಸೂರು ಒಡೆಯರಿಗೆ ಸೇರಿದ ಈ ಕ್ಷೇತ್ರ ಹೊಳೆ ನರಸೀಪುರವೆಂದು ಕರೆಯಲ್ಪಡುತ್ತದೆ ೧೧೬೮ರಲ್ಲಿ ನರಸಿಂಹನಾಯಕ ಎಂಬ ಪಾಳೆಗಾರನು ಇಲ್ಲಿ ಕೋಟೆಯನ್ನು ಕಟ್ಟಿಸಿದನು ೧೨೬೪-೯೧ ರಲ್ಲಿದ್ದ ೩ ನೇ ನರಸಿಂಹನ ಆಡಳಿತಕ್ಕೆ ಸೇರಿತ್ತು ಈ ಹಿಂದೆ ಹೊಯಿಸಳರ ನಂತರದಲ್ಲಿ ಚನ್ನರಾಯಪಟ್ಟಣವು, ಕ್ರಿ ಶ ೧೬೦೦ ರಲ್ಲಿ ಲಕ್ಷ್ಮಪ್ಪನಾಯಕನ ಕಾಲದಲ್ಲಿ ಹೊಳೆನರಸೀಪುರದ ಅಧೀನಕ್ಕೆ ಬಂದಿತು

## ಪುರಾಣಪ್ರತೀತಿ :

ಸಾಮಾನ್ಯವಾಗಿ ಪುಣ್ಯತೀರ್ಥಗಳ ಪರಿಚಯ, ಪುಣ್ಯಕಥೆಗಳ ಅರಿವು ನಾರದ ಮಹರ್ಷಿಯಿಂದ ಭೃಗುಮಹರ್ಷಿಗಳಿಗೆ ತಿಳಿಸಲ್ಪಟ್ಟಂತೆ ಕಾಣುತ್ತೇವೆ ಭೃಗುವಿನ ಆದೇಶದ ಮೇರೆಗೆ ನಾರದರು–

ಮಾಮಾಬ್ಜ ವಿಲಸತ್ಪದ್ಮ ಶಂಖ ಚಕ್ರಧರ
ಪ್ರಭೋ।
ಭಕ್ತಾ ಭಯ ಪ್ರಧಾನತ್ವಂ ನೃಸಿಂಹ
ಪುನೀಹಿಮಾಮ್ ॥

ಎಂಬ ಅಭಿಧಾನವನ್ನು ಹೊತ್ತ ಧರ್ಮ ಕ್ಷೇತ್ರದ ಪರಮ ಪುರುಷನಾದ ನೃಸಿಂಹನ ಕ್ಷೇತ್ರ ಮಹಿಮೆಯನ್ನು ಹೇಳುತ್ತಾರೆ. ಹೇಮಾವತಿಗೆ ದಕ್ಷಿಣದಲ್ಲಿ ಸಮಸ್ತ ಪಾಪಗಳನ್ನು ಪರಿಹರಿಸುವ ನೃಸಿಂಹಪುರವೆಂಬ ಪಟ್ಟಣವಿದೆ. ಪುರಾಣದ ಪ್ರಕಾರ ಪಟ್ಟಣದ ಮಧ್ಯದಲ್ಲಿ ಸೂರ್ಯನಿಗೆ ಸಮಾನವಾದ ಪ್ರಕಾಶದಿಂದ ಹೊಳೆಯುವ ಧರ್ಮಶೃಂಗವೆಂಬ ವಿಮಾನಾಗ್ರವು ಹೊಳೆಯುತ್ತಿದೆ. ಇಲ್ಲಿ ಮಹಾಮಹಿಮನಾದ ನೃಸಿಂಹ ಸ್ವಾಮಿಯು ಪ್ರಸನ್ನ–ಲಕ್ಷ್ಮಿಯಿಂದ ಒಡಗೂಡಿದ್ದಾನೆ. ಅಲಂಕೃತವಾದ ವಿಮಾನಕ್ಕೆ ವಾಯುವ್ಯ ದಿಗ್ಭಾಗದಲ್ಲಿ ಎಲ್ಲ ತೀರ್ಥಗಳಿಗೂ ಉತ್ತಮವಾದ ನೃಸಿಂಹ ಪುಷ್ಕರಣಿ ಇದೆ ಇದರ ಮೇಲೆ ಹೇಮಾವತಿನದಿ ಹರಿಯುತ್ತಿದೆ. ಫಾಲ್ಗುಣ ಮಾಸದ ಪೂರ್ಣಿಮೆಯದಿನ ಸೂರ್ಯೋದಯಕ್ಕೆ ಸಮಸ್ತ ತೀರ್ಥಗಳು ಸಂಗಮವಾಗುವ ಈ ತೀರ್ಥ ಹೇಮಾವತೀ ನದಿಯ ಮಧ್ಯಭಾಗದಲ್ಲಿ ಮುನ್ನೂರು ಧನುಸ್ಸಿನಷ್ಟು ವಿಸ್ತೀರ್ಣ ಎಂದು ಮುನಿಗಳು ಹೇಳುತ್ತಾರೆ

ವಸಿಷ್ಠ ಮಹರ್ಷಿಯ ತಪಸ್ಸಿನ ಫಲವಾಗಿ ಮನೋಹರವಾದ ಈ ನೃಸಿಂಹಸ್ವಾಮಿಯು ಆವಿರ್ಭವಿಸಿತು ಇಲ್ಲಿಯ ಮಹತ್ತ್ವವಾದ ವಿಷಯವೆಂದರೆ ವಸಿಷ್ಠರು ಉತ್ತರ ದಿಕ್ಕಿಗೆ ಮುಖಮಾಡಿ ಕುಳಿತು ತಪಸ್ಸುಮಾಡಿದ್ದರಿಂದ ನೃಸಿಂಹ ಎದುರಾಗಿ ದಕ್ಷಿಣ ಮುಖವಾಗಿ ಪ್ರತ್ಯಕ್ಷನಾದ ಇಂದಿಗೂ ಹಾಗೆಯೇ ಇದೆ ಈ ದೇವಾಲಯವು ತ್ರಿಕೂಟಾಚಲವೆನಿಸಿದೆ




## ಭಕ್ತಿ :

ಭಕ್ತಿ ವರ್ಧನ ಕ್ಷೇತ್ರವೆಂದು ಪ್ರಸಿದ್ಧವಾದ ಹೊಳೆನರಸೀಪುರ ಕ್ಷೇತ್ರದಲ್ಲಿ ಶ್ರೀ ಚತುರ್ಭುಜ ಪಟ್ಟಾಭಿರಾಮ ಮತ್ತು ಶ್ರೀ ನೀಲಕಂಠೇಶ್ವರ ಸ್ವಾಮಿಯವರ ದೇವಸ್ಥಾನಗಳಿವೆ. ಇವುಗಳನ್ನು ಕ್ರಿ. ಶ. ಸುಮಾರು ೧೫ ನೇ ಶತಮಾನದಲ್ಲಿ ವಿಜಯ ನಗರದ ಅರಸರ ಕಾಲದಲ್ಲಿ ಶ್ರೀರಾಮ ಬ್ರಹ್ಮಾನಂದರೆಂಬುವರು ಸ್ಥಾಪಿಸಿದರು. ಕಾವೇರೀ ತೀರದ ಚುಂಚನ ಕಟ್ಟೆ ಎಂಬ ಗ್ರಾಮದಲ್ಲಿ ಶ್ರೀ ರಾಮ ಸನ್ನಿಧಿಯಲ್ಲಿ ವೈರಾಗ್ಯ ಸಂಪನ್ನರಾಗಿದ್ದ ಕುಳಿತು ತಪಸ್ಸುಮಾಡಿ ಕೊಂಡಿದ್ದರು. ಹೀಗಿದ್ದಾಗ ಕನಸಿನಲ್ಲಿ ಆದ ಶ್ರೀರಾಮನ ಆದೇಶದಂತೆ ಹೊಳೆನರಸಿಪುರದ ಕಾಲುಹಾದಿಯ ಬಳಿ ನೆಲಸಿದರು ಅಲ್ಲಿ ತುಳಸೀವನದ ನೆಡುವುದಕ್ಕೆ ಅಗೆಯುತ್ತಿದ್ದಾಗ ಒಂದು ಸಾಲಿಗ್ರಾಮವು ಸಿಕ್ಕಿ ಪರೀಕ್ಷಿಸಲಾಗಿ ಸಹಸ್ರ ಚಕ್ರ ಮಧ್ಯದಲ್ಲಿ ಶ್ರೀರಾಮಮೂರ್ತಿಯು ನೆಲಸಿರುವಂತೆ ಕಂಡು ಬಂದುದಾಗಿ ತಿಳಿದು ಬರುತ್ತದೆ ನಂತರ ಆ ಸಾಲಿಗ್ರಾಮದ ಆಧಾರದಿಂದ ಶಿಲೆಯಲ್ಲಿ ಪ್ರತ್ಯೇಕವಾಗಿ ಶ್ರೀ ಸೀತಾರಾಮ ಲಕ್ಷ್ಮಣ ಭರತ ಶತ್ರುಘ್ನರ ವಿಗ್ರಹಗಳನ್ನು ನಿರ್ಮಿಸಿ ಅವುಗಳನ್ನು ಹೊಳೆನರಸೀಪುರದಲ್ಲಿ ದೇವಸ್ಥಾನ ನಿರ್ಮಾಣ ಮಾಡಿಸಿ ಪ್ರತಿಷ್ಠಿಸಿದರು. ಪಕ್ಕದಲ್ಲಿಯೇ ಮತ್ತೊಂದು ದೇಗುಲ ನಿರ್ಮಾಣ ಮಾಡಿಸಿ ಶ್ರೀ ನೀಲಕಂಠೇಶ್ವರ ದೇವರನ್ನು ಪ್ರತಿಷ್ಠಿಸಿ "ಹರಿಹರ ಪ್ರತಿಷ್ಠಾಪಕರು" ಎಂಬ ಕೀರ್ತಿಗೆ ಭಾಜನರಾದರು

ಶ್ರೀರಾಮರಿಗೆ ಉತ್ಸವ ಮೂರ್ತಿ ನಿರ್ಮಿಸಲು ಉತ್ತಮ ಶಿಲ್ಪಿಯನ್ನು ಕರೆಸಿ ವಿಗ್ರಹ ತಯಾರಿಸಲು ಆಜ್ಞೆಮಾಡಿದರು ಶ್ರೀಗಳ ಆದೇಶದಂತೆ ಶಿಲ್ಪಿ ಎರಡು ಬಾಹುಗಳ ಆಕಾರದ ಪ್ರತಿಮೆಯನ್ನು ಎರಕ ಹೊಯ್ದು ಸಾಯಂಕಾಲದಲ್ಲಿ ಕೆಲಸ ನಿಲ್ಲಿಸಿದನು. ಮಾರನೆಯ ದಿನ ಬಂದಾಗ

**ಶ್ರೀ ರಾ. ನ. ನ. ಮೂರ್ತಿ**

ವಿಗ್ರಹ ಪ್ರಸಿದ್ಧವಲ್ಲವೆಂದು ಪುನಃ ಎರಡು ಭುಜಗಳ ವಿಗ್ರಹ ಎರಕ ಹೊಯ್ಯಲು ಮತ್ತೆ ೪ ಭುಜ ಮಾಡಿ ಹೀಗೆಯೇ ನಾಲ್ಕುಬಾರಿಯಾಗಲು ಆದೇ ದೇವರಿಗೆ ಪ್ರೀತಿಯೆಂದು ನಿಶ್ಚಯಿಸಿ 'ಶ್ರೀ ಚತುರ್ಭುಜ ಪಟ್ಟಾಭಿರಾಮ' ನೆಂಬ ಹೆಸರಿನಿಂದ ಉತ್ಸವಮೂರ್ತಿಯನ್ನು ಪ್ರತಿಷ್ಠಿಸಿದರು. ಈ ದೇವಸ್ಥಾನ ಬಿಟ್ಟರೆ ಮತ್ತೆಲ್ಲಿಯೂ ಚತುರ್ಭುಜ ಶ್ರೀರಾಮದೇವರಿಲ್ಲ

ಆ ಕಾಲದ ವಿಜಯನಗರ ಸಂಸ್ಥಾನಾಧೀಶನಿಗೆ ಈ ವಿಷಯ ತಿಳಿದು ಆಸ್ಥಾನಿಕರಿಗೆ 'ಚತುರ್ಭುಜ ಮೂರ್ತಿ ಎಲ್ಲೂ ಕಂಡು ಬಂದಿಲ್ಲ, ಇದರಿಂದ ಶ್ರೇಯಸ್ಸಿಲ್ಲ, ವಿಚಾರಿಸಿ' ಎಂದು ಹೇಳಲು ಮನಸ್ಸಿನಲ್ಲಿ ಸಂಕಲ್ಪಿಸಿದ್ದನು ಆದರೆ ಪರೋಕ್ಷಜ್ಞಾನವುಳ್ಳ ಯೋಗನಿಷ್ಠರಿಗೆ ಧ್ಯಾನದೃಷ್ಟಿಯಿಂದ ತಿಳಿದು ಕ್ಷಣಮಾತ್ರದಲ್ಲಿ ಅಲ್ಲಿಗೆ ಸೇರಿದರು. ಇದನ್ನು ಕಂಡು ಇವರು ನಿಜವಾಗಿ ಮಹಾತ್ಮರು ಎಂದು ಯಥೋಚಿತವಾಗಿ ರಾಜನು ಸತ್ಕರಿಸಿದನು. ನಂತರ ಈ ವಿಗ್ರಹಕ್ಕೆ ಶಾಸ್ತ್ರಾಧಾರವನ್ನು ಗ್ರಂಥಗಳಿಂದ ತೆಗೆದುಕೊಟ್ಟರು. ನಂತರ ರಾಜನಿಂದ ಜೋಡಿಗ್ರಾಮಗಳನ್ನು ಪಡೆದು ಶ್ರೀರಾಮನಿ

ಉತ್ಸವಾದಿಗಳಿಗೆ ಸಮರ್ಪಿಸಿದ್ದು ಕಂಡು ಬರುತ್ತದೆ ನಂತರ ಅವರೂ ಅಂತರ್ಧಾನರಾದಂತೆಯೂ ಅವರ ವಿಗ್ರಹ ಪೂಜಾರ್ಹವಾಯಿತೂ ಇರುವುದನ್ನು ಕಾಣುತ್ತೇವೆ

ವೈಖಾನಸವೆಂಬ ಆಗಮಶಾಸ್ತ್ರದ ಕ್ರಮದಂತೆ ದೇವರಿಗೆ ಪೂಜೋಪಚಾರ, ಉತ್ಸವಾದಿಗಳನ್ನು ವಿಧಿಸಿದ ಆಗಮಾಚಾರ್ಯರೇ ವಿಖನಸ ಮಹಾಮುನಿಗಳು. ಐತಿಹಾಸಿಕ ದೃಷ್ಟಿಯಿಂದ ವೇದಗಳ ಕಾಲದಿಂದೀಚೆಗೆ ಸ್ಮೃತಿ, ಪುರಾಣಗಳ ಕಾಲಕ್ಕೆ ಈ ಆಗಮಶಾಸ್ತ್ರ ರಚಿತವಾಗಿರಬಹುದು. ದೊರೆತಿರುವ ಗ್ರಂಥಗಳಲ್ಲಿ ಮರೀಚಿ ಪ್ರೋಕ್ತ ಆನಂದ ಸಂಹಿತೆಯಲ್ಲಿ ಈ ಮಹಾತ್ಮರ ಉತ್ಪತ್ತಿಯ ವರ್ಣನೆಯಿದೆ. ಭಗವಂತನು ಬ್ರಹ್ಮನಿಗೆ ಆಜ್ಞಾಪಿಸಿ– ಲೋಕಾನುಗ್ರಹಕ್ಕೆ ಅರ್ಚಾವತಾರ ರೂಪದಿಂದ ಶ್ರೀದೇವಿ ಭೂದೇವಿಯರೊಡನೆ ನಾನು ಮಾಯೆಯಿಂದ ಅವತಾರ ಮಾಡುವೆನು. ಆಗ ನನ್ನ ಅರ್ಚನೆ ಮಾಡುವುದಕ್ಕೂ ಅದರ ಮೂಲಕ ಲೋಕದ ಪ್ರಾಣಿಗಳಿಗೆ ಭಗವಂತನ ಆರಾಧನೆಯಿಂದ ಪರಮಪುರುಷಾರ್ಥವಾಗುವುದೆಂಬುದನ್ನು ತಿಳಿಸುವುದಕ್ಕೂ ಅನುಕೂಲವಾಗುವಂತೆ ಪರಮ ಶ್ರೇಷ್ಠನೂ, ಭಕ್ತ ಶಿರೋಮಣಿಯೂ ಆದ ಒಬ್ಬ ಮಹರ್ಷಿಯನ್ನು ನೀನು ಮೊದಲು ಸೃಷ್ಟಿ ಮಾಡೆಂದನು. ಬ್ರಹ್ಮನು ಸಕಲ ಶಾಸ್ತ್ರಗಳನ್ನೂ ಶೋಧಿಸಿ ಅವುಗಳ ಸಾರವೆಂಬ ಒಬ್ಬ ಮನಸ್ವಿಯನ್ನು ಸೃಷ್ಟಿಸಿದನೆಂದು ತಿಳಿಯುತ್ತದೆ ಇವನನ್ನು ತಾನು ಸೃಷ್ಟಿಸಿದ ಕ್ರಮಕ್ಕೆ ಯೋಗ್ಯವಾಗಿ 'ವಿಖನಸ' ಎಂದು ಹೆಸರಿಸಿದನು. ಅಂದಿನಿಂದ ಆಸ್ತಿಕರಾದ ಸಂಪ್ರದಾಯಸ್ಥರಾದ ಅವರ ಅನುಯಾಯಿಗಳು ಲೋಕಕ್ಕೆ ಭಗವದರ್ಚನೆಯ ರಹಸ್ಯ ಉಪದೇಶಿಸಿ ವೈಖಾನಸಾಗಮೋಕ್ತ ವಿಧಿಯಲ್ಲಿಯೇ ಪೂಜೆಸಲ್ಲಿಸುತ್ತಿದ್ದಾರೆ.

ಇಲ್ಲಿಯ ದೇವಾಲಯಗಳಲ್ಲಿ ನಾಲ್ಕಾರು ಶಾಸನಗಳಿದ್ದು ಸ್ಥಳ ವಿಶೇಷ ಹಾಗೂ ಇತಿಹಾಸದ ದಾಖಲೆಗಳನ್ನು ದಾನ–ದತ್ತಿಗಳನ್ನು ಪ್ರಚುರ ಪಡಿಸುತ್ತವೆ ಗೋಪಾಲಕೃಷ್ಣ ಸ್ವಾಮಿ ನೃಸಿಂಹಸ್ವಾಮಿ ಎದುರು ಬದುರಾಗಿಯೂ, ಸ್ವಾಮಿಯ ಬಲಭಾಗಕ್ಕೆ ಲಕ್ಷ್ಮೀನಾರಾಯಣಸ್ವಾಮಿಯೂ ಇವೆ ವಿಷ್ವಕ್ಸೇನ, ಆಂಜನೇಯ, ಗರುಡ ವಿಗ್ರಹಗಳ ಜತೆ ಆಳ್ವಾರುಗಳ ಮೂರ್ತಿಗಳಿವೆ

ಗಣಪತಿ, ಕೇಶವ, ಷಣ್ಮುಖ, ವೀರಭದ್ರಸ್ವಾಮಿ, ವೆಂಕಟರಮಣಸ್ವಾಮಿ, ಸುಬ್ರಹ್ಮಣ್ಯಸ್ವಾಮಿ, ಪಾರ್ವತಿ, ಏಕಾಂತರಾಮೇಶ್ವರ, ವೈಲಾರಲಿಂಗೇಶ್ವರ, ಲಕ್ಷ್ಮಣೇಶ್ವರ ಈ ಎಲ್ಲ ಮೂರ್ತಿಗಳಿಂದ ಇದು ದೈವ ಸಂಗಮವೆನಿಸಿದೆ ಅಲ್ಲದೆ ಅಧ್ಯಾತ್ಮ ಪ್ರಕಾಶನ ಕಾರ್ಯಾಲಯ, ಉತ್ತರಾದಿಮಠ ಇರುವ ಈ ಕ್ಷೇತ್ರದಲ್ಲಿ ಚಕ್ರತ್ತಾಳ್ವಾರ್, ಗಜಲಕ್ಷ್ಮಿ, ದುರ್ಗಿ, ಆಂಡಾಳ್, ಕನ್ನಿಕಾಪರಮೇಶ್ವರಿ ಮುಂತಾದ ಗುಡಿ – ಗೋಪುರಗಳಿಂದ ತುಂಬಿದ್ದು ಪ್ರೇಕ್ಷಣೀಯ ಪುಣ್ಯಕ್ಷೇತ್ರವಾಗಿದ್ದು ಭಕ್ತಿವರ್ಧನ ಕ್ಷೇತ್ರವೆಂಬ ನಾಮವನ್ನು ಆ ಚಂದ್ರಾರ್ಕವಾಗಿ ಬೆಳಗಿಸುವುದರಲ್ಲಿ ಸಂದೇಹವಿಲ್ಲ.

## ಶ್ರೀ ಪದ್ಮಾವತೀ ದೇವಾಲಯ



### ಆರ್ಜಿತ ಅಭಿಷೇಕ

ತಿರುಚಾನೂರಿನಲ್ಲಿನ ಶ್ರೀ ಪದ್ಮಾವತೀದೇವಿಯವರಿಗೆ ಪ್ರತಿ ಶುಕ್ರವಾರವೂ ಆರ್ಜಿತ ಅಭಿಷೇಕ ಸೇವೆ ಏರ್ಪಾಟು ಮಾಡಲಾಗಿದೆ. ಟಿಕೆಟ್ಟಿಗೆ ರೂ. 100/- ಸಲ್ಲಿಸಿ ಗೃಹಸ್ಥರು ಭಾಗವಹಿಸಬಹುದು. ಗೃಹಸ್ಥರು, ಅವರ ಸಂಬಂಧೀಕರು ಒಟ್ಟು ಇಬ್ಬರು ಕ್ಷೀರ ಪಾತ್ರೆಗಳನ್ನು ಆಲಯದಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಲು ಅನುಮತಿಸಲ್ಪಡುವರು. ಅನಂತರ ಅವರು ಅಭಿಷೇಕ ದರ್ಶನ ಮಾಡಬಹುದು. ಆದರೆ ಪ್ರಸಾದಮಾತ್ರ ಕೊಡಲ್ಪಡುವುದಿಲ್ಲ. ಭಕ್ತರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬಹುದು.

ಹರಿದಾಸ ವಾಣಿ

# ಹರಿದಾಸ ಸಾಹಿತ್ಯದಲ್ಲಿ ಸಮರ್ಪಣಾಭಾವ

ಕನ್ನಡ ಸಾಹಿತ್ಯದ ತವನಿಧಿಯಲ್ಲಿ ಹರಿದಾಸ ಸಾಹಿತ್ಯವು ಬಹು ಅಪೂರ್ವವಾದ ಭಾಗ. ಅದು ಇಡೀ ಮಾನವಧರ್ಮಕ್ಕೆ ಬೆಳಕನ್ನು ನೀಡುವ ಮಹಾಶಕ್ತಿ. "ಮಾನವ ಜನ್ಮ ದೊಡ್ಡದು. ಇದ ಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ" ಎಂಬುದೇ ಆ ಮಹಾಶಕ್ತಿಯ ಪೌರುಷವಾದದ ಉದ್ಘೋಷ. ಇದನ್ನು ಸಾರ್ಥಕ ಪಡಿಸಿದವರು ದಾಸವರೇಣ್ಯರು. ಅವರೆಲ್ಲ ಭಕ್ತಿಮಾರ್ಗದಲ್ಲಿ ಸಾಗಿ ತಮ್ಮನ್ನೇ ತಾವು ಪರಮಾತ್ಮನಿಗೆ ಅರ್ಪಿಸಿಕೊಂಡವರು. ಭಗವಂತನ,

"ಅನನ್ಯಾಶ್ಚಿಂತಯಂತೋ ಮಾಂ
ಯೇ ಜನಾಃ ಪರ್ಯುಪಾಸತೇ
ತೇಷಾಂ ನಿತ್ಯಾಭಿಯುಕ್ತಾನಾಂ
ಯೋಗಕ್ಷೇಮಂ ವಹಾಮ್ಯಹಮ್ ॥"

–ಎಂಬ ಮಾತನ್ನು ಎತ್ತಿ ಹಿಡಿದವರು.

ಅವರ ದೃಷ್ಟಿಯಲ್ಲಿ 'ಭಕ್ತಿ' ಎಂಬುದು ಬಹು ಹಿತವಾದದ್ದು. ಏಕೆಂದರೆ ಭಕ್ತಿಯ ಮುಖಾಂತರವಾಗಿ ಮನುಷ್ಯನಿಗೆ ನಿಜವಾದ ಸುಖವು ದೊರೆಯುತ್ತದೆ. ನಿಜವಾದ ಸುಖವೆಂದರೆ ಆನಂದ. ಆನಂದವು ದೇವರ ಆರಾಧನೆಯಿಂದ ದೊರೆಯುತ್ತದೆ ಈ ತರಹದ ಆರಾಧನೆಯೆಂದರೆ ಪರಮಾತ್ಮನಲ್ಲಿ ಪೂರ್ಣವಿಶ್ವಾಸವಿಟ್ಟು ಶ್ರದ್ಧೆಯಿಂದ ಭಜಿಸುವುದು. ಇದೇ ನಿಜವಾದ ಭಕ್ತಿ. ಇದರ ಮುಖಾಂತರ ಪರಮಾತ್ಮನ ಸ್ನೇಹ ಪ್ರಾಪ್ತಿ. ಇಂತಹ ಅಸದಳವಾದ ಭಕ್ತಿಯನ್ನು,

" ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ
ಅರ್ಚನಂ ವಂದನಂ ದಾಸ್ಯಂ ಸಖ್ಯಂ ಆತ್ಮನಿವೇದನಂ
ಇತಿ ಪುಂಸಾರ್ಪಿತಾ ವಿಷ್ಣೌ ಭಕ್ತಿಶ್ಚ ನವಲಕ್ಷಣಾ ॥ "

ಎಂಬ ಕ್ರಮದಲ್ಲಿ. ಮಾಡಬೇಕು. ಹೀಗೆ ಹೇಳುವಾಗ, ಸುಖದುಃಖಗಳನ್ನು ದೇವರಿಗೆ ನೀವೇದಿಸಬೇಕು' ಎಂಬುದು ಗಮನಾರ್ಹವಾದುದು ಇಲ್ಲಿ ಭಕ್ತನು ಸಮರ್ಪಣಾಭಾವವನ್ನು ತಾಳಿದ್ದರೆ ಮಾತ್ರ ಮೇಲೆ ಎತ್ತಿ ಹೇಳಿದ ಪ್ರತಿಯೊಂದು ಮಾತೂ ಅಮೂಲ್ಯವಾಗುತ್ತದೆ. ಹಾಗೆ ಮೌಲ್ಯ ರೂಪದಲ್ಲಿ ಬದುಕನ್ನೇ ಸಮರ್ಪಿಸಿದವರು ದಾಸರು. ಅವರ ಸಮಗ್ರ ಬದುಕೇ ಕಾವ್ಯ. ಅದೇ ವಿಶ್ವಸಾಹಿತ್ಯಕ್ಕೆ ಕನ್ನಡವು ಇತ್ತ ಕೊಡುಗೆ. ಇಂಥ ಸಮರ್ಪಿತ ಬದುಕಿನ ಕಾವ್ಯದಲ್ಲಿ ನಿಷ್ಕಾಮ ತತ್ತ್ವವು ತಳಹದಿಯಾಗಿರುತ್ತದೆ. ಅಂತೆಯೇ ಇಲ್ಲಿ ಒಂದೊಂದು ಕಣವೂ ಈಶ್ವರನ ಅಂಶವೇ ಆಗಿರುತ್ತದೆಂಬುದು ನಿಸ್ಸಂದೇಹ ಅದ್ದರಿಂದ ಜೀವಿಗೆ ಪಾಪ-ಪುಣ್ಯ, ಅಪಯಶಸ್ಸು-ಯಶಸ್ಸು, ನರಕ-ಸ್ವರ್ಗಗಳೆ ಇಲ್ಲ. ಇದಕ್ಕೆ ದಾಸ ಪಂಥದ ಪ್ರತಿಯೊಬ್ಬರ ಜೀವನವೂ ಸತ್ಯಸಾಕ್ಷಿ ನುಡಿಯುತ್ತದೆ.

ಶ್ರೀನಿವಾಸನಾಯಕನು ಮಹಾ ಜಿಪುಣ. ಅಂತೆಯೇ ಅವನು ನವಕೋಟಿನಾರಾಯಣ. ಪತ್ನಿಯ ಚಾರಿತ್ರ್ಯಧರ್ಮವು ಅವನ ಕಣ್ಣು ತೆರೆಯಿಸಿತು. ಮೂಗುದೆಯ ಕಥೆ ಮುಕ್ತಿಯನ್ನು ಹೇಳಿತು ಮನದ ಕಣ್ಣು ನಿಚ್ಚಳವಾದಾಗ ತುಂಬಿದ ಮನೆಗೆ ತುಳಸೀ ಪತ್ರವಿರಿಸಿ ಕೃಷ್ಣಾರ್ಪಣವನ್ನು ಹೇಳಿಸಿತು. ಕಾಸುಕೂಡ ಇಲ್ಲದಾಗ ಮನುಷ್ಯನ ಹೃದಯವು ವಿಶಾಲವಾಗಿರುವುದರಲ್ಲಿ ಸಂದೇಹವಿಲ್ಲ. ಆದರೆ ಕಾಸಿನಿಂದಲೇ ತುಂಬಿರುವವನ ಹೃದಯವು ವಿಶಾಲವಾಗಿರುವುದು ಅಪರೂಪದ ಮಾತೇ ಸರಿ. ಹಾಗೆ ಹೃದಯವು ವಿಶಾಲವಾಗಿದ್ದರೆ ಅಂತಹವನ ಬದುಕು ಶ್ರೇಷ್ಠ ಮೌಲ್ಯದ ಬದುಕು. ಸಮರ್ಪಣೆಯಿಂದ ಮುಕ್ತಿ ಸಾಧ್ಯವೆಂಬುದಕ್ಕೆ ಅದು ಸಮರ್ಪಕ ಉದಾಹರಣೆ. ಅಂತೆಯೇ "ದಾಸರೆಂದರೆ ಪುರಂದರ ದಾಸರಯ್ಯ" ಎಂಬುದು ಶ್ರೀನಿವಾಸನಾಯಕನಿಗೆ ಗುರುವಿನಿಂದ ಬಂದ ಬಿರುದು ಸಾರ್ಥಕ. ಅದರಂತೆ,

" ಮನೋಭೀಷ್ಟದಾತಾರಂ ಸರ್ವಾಭೀಷ್ಟ ಫಲಪ್ರದಂ
ಪುರಂದರಗುರುಂ ವಂದೇ ದಾಸ ಶ್ರೇಷ್ಠ ದಯಾನಿಧಿಂ "

ಎಂಬುದು ಆ ಮಾತಿಗೆ ಪೂರಕ, ಪೋಷಕ.

ದಾಸರ ಸಮರ್ಪಣಾಭಾವದ ಜೀವನ ಸಾಧನೆಯಲ್ಲಿ ಸಿದ್ಧಿಯು ತುಂಬಿ ತುಳುಕುತ್ತಿರುತ್ತದೆ. ಅದರ ಫಲ ಸತ್ಪಾತ್ರರಿಗೆಲ್ಲ ದೊರೆಯಲೇಬೇಕು ಶ್ರೀ ವೈಕುಂಠದಾಸರ ಕರುಣೆಯಿಂದ ಶ್ರೀ ಅಚ್ಯುತದಾಸರಿಗೆ (ಅಚಲಾನಂದರಿಗೆ) ಹೋದ ಕಣ್ಣು ನಾಲಗೆಗಳು ಬಂದುದನ್ನು ನೆನೆಸಿಕೊಳ್ಳಬಹುದು. ಇಂಥ ಸಂದರ್ಭಗಳಲ್ಲಿ ಜಾತಿಮತಕೋಟಿಗಳಾವುವೂ ತಮ್ಮ ಮಂಗತನವನ್ನು ತೋರಿಸಲಾರವು. ದಾಸರಪುಣ್ಯ ಪ್ರಭಾವದಲ್ಲಿ ವೇಲಾಪುರಿ ಕೇಶವನ ಕ್ಷೇತ್ರ ವಾದುದನ್ನೂ ವೀರಶೈವರಾದ ನಂಜಪ್ಪ ಮಾದಪ್ಪನಿಗೆ ಆಶ್ರಯ ದೊರೆತುದನ್ನೂ ಇಲ್ಲಿ ಸ್ಮರಿಸಿ ಕೊಳ್ಳಬಹುದಾಗಿದೆ.

ಕನಕದಾಸರ, ಜೀವನದಲ್ಲಿಯೂ, ಸಮರ್ಪಣಾಭಾವರತ್ನದಿವ್ಯಪ್ರಭೆ, ಚಿರಂತನವಾಗಿರುವುದನ್ನು ನೋಡಬೇಕಾದುದು ದಾಸ ಸಾಹಿತ್ಯಭ್ಯಾಸಿಗಳಿಗೆ ಅತ್ಯಂತ ಉಚಿತವಾಗಿದೆ. ಕನಕದಾಸರು ಪುರಂದರದಾಸರ ಸಮವಯಸ್ಕರು, ಸಮಕಾಲೀನರು. ಒಂದೇ ಗುರುವಿನ ಶಿಷ್ಯರು, ಗಂಡಭೇರುಂಡರು ಪಾಳೆಯಗಾರರು. ಬಾಡದ ಸುತ್ತ ಹರದಾರಿಹತ್ತರ ಢಣಾಯಕರು. ಪುರಂದರದಾಸರಂತೆ ಕೋಟ್ಯಾಧೀಶರು. ಭೂಶೋಧನೆಯಲ್ಲಿ ಕನಕರಾಶಿಯನ್ನೇ ಕಂಡವರು ಆ ಐಶ್ವರ್ಯದಿಂದ ಬಾಡದಲ್ಲಿ ಆದಿಕೇಶವನನ್ನು ಪ್ರತಿಷ್ಠಾಪಿಸಿ ವೈರಾಗ್ಯದ ನಿಧಿಯಾಗಿ, ಸರ್ವಸ್ವವನ್ನೂ ಸಮಾಜಕ್ಕೆ ಧಾರೆಯೆರೆದವರು. ಈಶನ ಕರುಣೆಯಿಂದ "ಈಶ ನಿನ್ನ ಚರಣ ಭಜನೆ! ಆಶೆಯಿಂದ ಮಾಡುವೆನು! ದೋಷರಾಶಿ ನಾಶಮಾಡು! ಶ್ರೀಶ ಕೇಶವ" ಎಂದು 24 ಕೇಶವ ನಾಮವನ್ನು ಅಖಂಡವಾಗಿ ಸ್ಮರಿಸುತ್ತ "ಸತ್ಯವಾದೀ ನಾಮಗಳನ್ನು! ನಿತ್ಯದಲ್ಲಿ ಪಠಿಸುವರನು ಅರ್ಥಿಯಿಂದ ಸಲಹುವನು ಕರ್ತೃ ಕೇಶವ॥" ಎಂಬ ವಿಶ್ವಾಸವನ್ನು ಜಗತ್ತಿಗೆ ನೀಡುತ್ತ "ಮರೆಯದಲೆ ಹರಿಯ ನಾಮ! ಬರೆದು ಓದಿ ಕೇಳಿದರ್ಗೆ! ಕರೆದು ಮುಕ್ತಿ ಕೊಡುವ ನೆಲೆಯಾದಿಕೇಶವ" ಎಂದು ಸ್ಪಷ್ಟವಾಗಿ ಸಾರಿ ಹೇಳಿದ್ದಾರೆ. ಅಲ್ಲದೆ ಜನೋಪಯೋಗಿ ಅನೇಕ ಕಾರ್ಯಗಳನ್ನು ಎಸಗಿ ಮಾಸದ ಮರೆಯದ ಕಾವ್ಯವಾಗಿದ್ದಾರೆ.

ವಿಜಯದಾಸರ ಸಮರ್ಪಣಾಜೀವನವಂತೂ ಬಹುಜನರಿಗೆ ಸಂಜೀವಿನಿ, ಉಪಕಾರಿ. ಅವರ ಬದುಕಿನ ಯಾವ ಕಣವನ್ನು ಅದುಮಿದರೂ ಅಲ್ಲಿ ದಿವ್ಯ ಚೈತನ್ಯಸ್ಫುರಣ. ಬದುಕಿನ ಮಂದಾರದ ಘಮ ಘಮ. ಬಡತನದ ಭೋಗವನ್ನು ಸಾಕಷ್ಟು ಅನುಭವಿಸಿದ್ದರೂ, ಕೊನೆಯವರೆಗೂ ಆ ಬಡತನವೇ ತಮ್ಮ ಜೀವನಮಾರ್ಗವೆಂದು ನಂಬಿ

**ಪ್ರೊ॥ ವಸಂತಕುಷ್ಟಗಿ**

ಸಾಗಿದ್ದರೂ, ಆ ದಿವ್ಯಸಾಧನೆಯಲ್ಲಿ ಅವರು ತಾವು ಗಳಿಸಿದ ಜೀವನ ಚಾರಿತ್ರ್ಯದ ಪುಣ್ಯವನ್ನೆಲ್ಲ ಅನೇಕ ಪಂಡಿತ ಪಾಮರರಿಗೆ ಅವರವರ ಅರಿವನ್ನು ಅವರಿಗೆ ನೆರವು ನೀಡಿಸುವಲ್ಲಿ ವಿನಿಯೋಗ ಮಾಡಿದ ಸಾತ್ವಿಕ ಜೀವನ ತೇಜಸ್ಸು. ಕಲ್ಲೂರ ಸುಬ್ಬಣ್ಣಾಚಾರ್ಯರು 'ವ್ಯಾಸವಿಠಲ'ರಾಗಿ, "ಸ್ಮರಿಸಿ ಬದುಕಿರೋ ದಿವ್ಯ ಚರಣಕೆರಗಿರೋ। ದುರಿತ ತರಿದು ಪೊರೆವ ವಿಜಯಗುರುಗಳೆಂಬರ" ಎಂಬ ಪಲ್ಲವಿಯೊಡನೆ ಆರಂಭವಾಗುವ ಇಪ್ಪತ್ತೇಳು ನುಡಿಗಳ 'ವಿಜಯ ಕವಚ'ವನ್ನು ಹಾಡಿದ್ದು, "ಚಿರಂಜೀವಿಯಾಗಲವೊ ಚಿಣ್ಣ ನೀನು। ಹರಿದಾಸ ದಾಸ ದಾಸರ ಪಾದ ಧೂಳಾಗಿ ॥" ಎಂಬ ಹಾರೈಕೆಯಿಂದ ಆನೆಗುಂದಿಯ ಭೀಮಪ್ಪನಾಯಕನೆಂಬ ಚಿನಿವಾರನ ಮಗು ಮೋಹನದಾಸರಾಗಿ "ನಿನ್ನ ಪಾದವನಂಬಿ ಅನ್ಯರಾಶ್ರಮವೇಕೋ ಚೆನ್ನಗುರು ವಿಜಯರಾಯ" ಎಂದು ಹಾಡಿದ್ದು, ಪಂಗನಾಮದ ತಿಮ್ಮಣ್ಣನು, 'ವೇಣುಗೋಪಾಲ ವಿಠಲ'ನಾಗಿ, "ನಿನ್ನ ನಂಬಿದ ನರಗೆ–ಅನ್ಯರಾಶ್ರಯವೇಕೋ। ಚೆನ್ನ ಗುರುವಿಜಯರಾಯ" ಎಂದು ಹಾಡಿದ್ದು, ಪಂಡಿತ ಶ್ರೀನಿವಾಸಚಾರ್ಯರು ಜಗನ್ನಾಥದಾಸರಾಗಿ "ರತ್ನ ದೊರಕಿತಲ್ಲಾ। ಎನಗೆ ದಿವ್ಯ ರತ್ನದೊರಕಿತಲ್ಲಾ। ರತ್ನ ದೊರಕಿತು ಎನ್ನ ಜನ್ಮ। ಪವಿತ್ರವಾಯಿತು ಈ ದಿನದಿ ನಾ ॥ ಪ ॥ ಯತ್ನಗೈಯುತ ಬರುತಿರಲು ಪ್ರಯತ್ನವಿಲ್ಲದೆ ವಿಜಯರಾಯರೆಂಬ ॥ ಅ.ಪ ॥" ಎಂದು ಹಾಡಿದ್ದು ಇನ್ನು ಇಂತಹ ಅನೇಕ ನಿದರ್ಶನಗಳನ್ನು ವಿಜಯದಾಸಾರ್ಯರ ಸಮರ್ಪಣಾಭಾವದ ಶಕ್ತಿಯ ಬೆಳಕಿನಲ್ಲಿ ಎತ್ತಿ ತೋರಿಸಬಹುದಾಗಿದೆ. ಅಂತೆಯೇ,

"ಅಜ್ಞಾನ ತಿಮಿರಾದಿತ್ಯಂ ಅತ್ಮಾನಂದ ಪದಪ್ರದಂ।
ವಿಜ್ಞಾನ ಮಿಮಲಂ ಶ್ರೇಷ್ಠಂ ವಿಜಯಾರ್ಯ ಗುರುಂಭಜೆ ॥"

ಎಂಬುದು ಇಂದಿಗೂ ಭಕ್ತಿಮಾರ್ಗದಲ್ಲಿ ತಾರಕ ಮಂತ್ರವಾಗಿ ನಿಂತಿದೆ

'ಭಕ್ತಿಯಲ್ಲಿ ಭಾಗಣ್ಣ' ಎಂಬ ಪೂಜ್ಯತೆಯನ್ನು ಗಳಿಸಿಕೊಂಡಿರುವ ಗೋಪಾಲದಾಸರ ಜೀವನವೂ ಕೂಡ ಈ ದಿಸೆಯಲ್ಲಿ ಅಷ್ಟೇ ಮಹತ್ವವಾದದ್ದು ಏಕೆಂದರೆ ವಿಜಯದಾಸರಂತೆ–ಇವರೂ ಕೂಡ ತಮ್ಮ ಸಾಧನಾ ಸಂಪತ್ತಿನ ಪ್ರಭಾವವನ್ನು ಆದಷ್ಟೋ ಪಂಡಿತ–ಪಾಮರರನ್ನು ಉದ್ಧಾರಮಾಡಲು ವಿನಿಯೋಗಿಸಿದವರು. ಇವರ ಪ್ರಭಾವದಲ್ಲಿ ವ್ಯಾಸತತ್ತ್ವಜ್ಞರ ಕಣ್ಣುಗಳು ತಿಳಿಯಾಗಿ ಅವರು ವಾಸುದೇವವಿಠಲಾಂಕಿತ ದಾಸರಾದುದು ಸಾಮಾನ್ಯವಿಷಯವಲ್ಲ. ಅದರಲ್ಲಿಯೂ ವಿಶೇಷವಾಗಿ ಇವರು ಆಯುಸ್ಯದಾನವನ್ನು ಮಾಡಿದ ಮಹಾಮಹಿಮರೆಂಬುದನ್ನು ಮರೆಯುವಂತಿಲ್ಲ. ಎಲ್ಲರೂ ಎಲ್ಲ ಕಾಲಗಳಲ್ಲಿಯೂ ಅನ್ನದಾನ, ದ್ರವ್ಯದಾನ ಜ್ಞಾನದಾನಗಳನ್ನು ಮಾಡಬಹುದು. ಆದರೆ ಆಯುರ್ದಾನವನ್ನು ಮಾಡುವವರು ಅಪರೂಪ. ಅಂತಹ ಮಹಾಹರಿಶರಣರು ಗೋಪಾಲದಾಸರು. ಅವರ ಸಮರ್ಪಣಾಭಾವದ ಇಂತಹ ಮಹಾಪ್ರಭಾವದಿಂದಲೇ ಜಗನ್ನಾಥದಾಸರಿಂದ ಹರಿಕಥಾಮೃತಸಾರದಂತಹ, ಕೊಡುಗೆ, ಜಗತ್ತಿಗೆ ಬಂದುದು ಚಿರಸ್ಮರಣೀಯ.

ಹೀಗೆ ಸಮರ್ಪಣಾಭಾವದ ಭಕ್ತರ ತುಂಬು ಬದುಕಿನ ಮೌಲ್ಯಗಳ ಬೆಳಕಿನಲ್ಲಿ ಲೋಕೋದ್ಧಾರವಾದ ಪ್ರಕರಣಗಳು ಅನಂತ. ಅವು ಸೃಷ್ಟಿಯ ಅಂತಃಕರಣದಲ್ಲಿ ಅವ್ಯಾಹತವಾಗಿ ಬೆಳಕಿಗೆ ಬರುತ್ತಲೇ ಇರುತ್ತವೆ. ಮುಸುಕಿದ ಮಬ್ಬನ್ನು ಕಳೆದು ಅಂತರಂಗದಲ್ಲಿದ್ದ ಪರಮಾತ್ಮನನ್ನು ಪ್ರಕಟಿಸಲು ಅವು ಪ್ರೇರಣೆಯಾಗುತ್ತಲೇ ಸಾಗಿವೆ. ಇಲ್ಲಿ ದಾಸಾರ್ಯರ ಬದುಕೆಲ್ಲ ಬದುಕಿನ ಸುಂದರ ವ್ಯಾಖ್ಯಾನವಾಗಿರುವುದನ್ನು ಕಾಣಬಹುದಾಗಿದೆ. ಅಷ್ಟೇ ಅಲ್ಲ; ಅವರ ಬದುಕೇ ಸುಂದರವಾಗಿ ಬೆಳೆದು ಬಂದಿದೆ. ಆ ಸೌಂದರ್ಯದಲ್ಲಿ ಸತ್ಯದ ದಿವ್ಯದರ್ಶನ–ಅದೂ ಕೂಡ ಈ ನೆಲದಲ್ಲಿಯೇ ಇದೇ ಜನ್ಮದಲ್ಲಿಯೇ ಪರಮಾತ್ಮನ ಸಾಕ್ಷಾತ್ಕಾರ–ಆ ಮೂಲಕವೆಂಬುದು ನಿತ್ಯಸತ್ಯ. ಈ ರೀತಿಯಲ್ಲಿ ದಾಸಾರ್ಯರ ನಿತ್ಯ ಜೀವನವೇ ಹೀಗಿರುವಾಗ ಅವರು ನಡೆದು ಆಡಿದ್ದೆಲ್ಲ ಪದಪದ್ಯವಾಯಿತು. ದಾಸಸಾಹಿತ್ಯವೆಂಬ ಮೇರು ಕಾವ್ಯವಾಯಿತು. ಬದುಕಿನಲ್ಲಿ ಉದ್ಬುದ್ಧವಾಗಿ ಬಂದಂತೆ ಅಲ್ಲಿಯೂ ಸಮರ್ಪಣಾಭಾವವು ತ್ರಿಪಥಗೆಯಾಯಿತು. ಅಲ್ಲಿ ಅದು ತ್ರಿಕಾಲಜ್ಞಾನಿಯಾಗಿ ಹರಿಯುತ್ತ ಬಂದಿತು. ಅದರಿಂದ ಮಾನವಜನ್ಮ ಪಾವನ ಗಂಗೋತ್ರಿಯಾಗಿ ಸರ್ವೋಚ್ಚವಾಯಿತು. ಬದುಕಿನಲ್ಲಿ ನಂಬಿಗೆಯನ್ನು ಹುಟ್ಟಿಸಿ ಪುರುಷೋತ್ತಮನನ್ನು ಅಲ್ಲಿಗೇ ಕರೆದು ತುಂದು ನಿಲ್ಲಿಸಿತು.

ದಾಸಸಾಹಿತ್ಯದ ದ್ರಷ್ಟಾರರ ಪದಪದ್ಯಗಳಲ್ಲಿ ಮೇಲೆ ವಿವರಿಸಿದ ಸಮರ್ಪಣಾಭಾವದ ವಿಸ್ತಾರವು ಹೇಗೆ ಹಾಸುಹೊಕ್ಕಾಗಿದೆಯೆಂಬುದನ್ನು ಕೆಲವು ದಾಸವರೇಣ್ಯರ ಸಾಹಿತ್ಯದಲ್ಲಿಯ ಕೆಲವಾದರೂ ಮಾತಾಗಳನ್ನೆತ್ತಿ ಗುರುತಿಸುವುದು ಸಮಂಜಸವಾದೀತು.

ಪುರಂದರದಾಸರ ಸಾಹಿತ್ಯದಲ್ಲಿಯ ಕೆಲವು ಮಾತುಗಳು ಇಂತಿವೆ

"ಅಪರಾಧಿ ನಾನಲ್ಲ ಅಪರಾಧವೆನಗಿಲ್ಲ
ಕಪಟನಾಟಕ ಸೂತ್ರಧಾರಿ ನೀನೆ"

* * * *

"ನಿನ್ನಾಧೀನ ಎನ್ನ ತನುಮನ
ನಿನ್ನಧೀನ ಎನ್ನ ಧನಧಾನ್ಯ"

* * * *

"ನಾನೇಕ ಪರದೇಶಿ ನಾನೇಕೆ ಬಡವನು
ನೀನಿರುವ ತನಕ ಹರಿಯೆ"

* * * *

"ನಂಬು ಶ್ರೀ ಪುರಂದರವಿಠಲನ ಚರಣವನು
ನಂಬಿದರೆ ಸಲಹದಿರನೇ ಮರುಳೆ"

* * * *

"ಮುಟ್ಟಬೇಡ ಹರಿಗರ್ಪಿತವಲ್ಲದನ್ನ ಕಂ।
ಗೆಟ್ಟು ತುತಿಸಬೇಡ ಹರಿಯಲ್ಲದನ್ಯತ್ರ"

* * * *

"ಚೆಲ್ವ ಶ್ರೀಪುರಂದರ ವಿಠಲರಾಯನ್ನು ಬಲ್ಲ
ವರಿಗೆಲ್ಲಿಹುದೊ ಪಾಪಪುಣ್ಯದ ಲೇಪ"

* * * *

"ಅಚ್ಯುತನ ದಯೆಯಿದ್ದವರಿಗೆ ಮಚ್ಚರಿಗಳಿಂದ
ಕೇಡುಂಟೆ"

* * * *

"ಹರಿಯನ್ನು ನಂಬಿದ ಶರಣರು ಕಿಚ್ಚಿನಂತೆ
ಇರುವರು ಕಿಚ್ಚಿಗೆ ಇರುವೆ ಮುತ್ತುವುದೆ ?"

* * * *



"ನಿನ್ನ ದಾಸರ ದಾಸ್ಯವ ಲೇಸಾಗಿ ಕೊಡು
ಕಂಡ್ಯ ಪುರಂದರ ವಿಠಲ"

* * * *

"ದಾಸನಾದವಗೆ ವೈಕುಂಠದಲ್ಲಿ ವಾಸ।
ದಾಸನಾಗದವನೆಲ್ಲಿ ಹೋದರಾಭಾಸ ॥"

* * * *

"ಸಕಲವೆಲ್ಲವು ಹರಿಸೇವೆಯೆನ್ನಿ
ರಕುಮಿಣಿಯರಸ ವಿರೇನಲ್ಲದಿಲ್ಲವೆನ್ನಿ"

* * * *

ಈ ಮೇಲಿನ ಪುರಂದರವಾಣಿಯಲ್ಲಿ ಆತ್ಮಭಕ್ತಿಯ ಜೊತೆಗೆ ಅಂತರಂಗ ಪರಿಶೋಧನೆ ನಡೆದು ಪರಮಾತ್ಮನಲ್ಲಿ ಅನನ್ಯಭಾವದಿಂದ ಶರಣು ಬಂದಾಗಿನ ಘನತೆಯು ಸುಂದರವಾಗಿ ಅಭಿವ್ಯಕ್ತಗೊಂಡಿದೆ

ಪುರಂದರದಾಸರಂತೆ ಕನಕದಾಸರ ಸಾಹಿತ್ಯದಲ್ಲಿ ಮೇಲಿನ ರೀತಿಯ ಭಕ್ತಿಭಾವವು ಸೂಸಿ ಹರಿದಿದೆ ಆದರ ಸೊಗಸನ್ನು ಕಿಂಚಿತ್ ಇಲ್ಲಿ ಸಂಗ್ರಹಿಸುವುದು ಸಮಂಜಸ ಅಂತಹ ಒಂದು ಪದ್ಯ ಇಂತಿದೆ.

"ತನು ನಿನ್ನದು ಜೀವನ ನಿನ್ನದು ರಂಗ
ಅನುದಿನದಲಿ ಬಾಹ ಸುಖ ದುಃಖ
ನಿನ್ನದಯ್ಯಾ ॥

ಇದು ಸಾಧಕನಿಗೆ ದಾರಿದೀಪವಾಗಿವೆ. ಈ ಸದಾಚಾರದಲ್ಲಿ ಸಾಗಿದವನಿಗೆ,

"ನಂಬು ನಾರಾಯಣನನೆಂಬೋ ನರಹರಿಯ
ನಂಬಿದಾ ಭಕ್ತರ ಕುಟುಂಬ ಸಾರಥಿಯ"

ಎಂಬಂತಹ ಅನೇಕ ಸಾಂತ್ವನದ ಮಾತುಗಳೂ ನಂಬಿಕೆಯಮಾತುಗಳೂ ದಾರಿಯುದ್ದಕ್ಕೂ ದೊರೆಯುತ್ತವೆ.

ಸಮರ್ಪಣಾಭಾವದ ಹರಿದಾಸ ಸಾಹಿತ್ಯ ತರಂಗಿಣಿಯ ಬದುಕಿನನಂದನವನಕ್ಕೆ ಪುರಂದರದಾಸರು, ಕನಕದಾಸರು ಮೊದಲಾದವರಂತೆ ವಿಜಯದಾಸರೂ ತಮ್ಮ ಅಮೌಲ್ಯ ಕಾಣಿಕೆಯನ್ನು ಸಲ್ಲಿಸಿದ್ದಾರೆ. ಆ ಕಾಣಿಕೆಯಲ್ಲಿಯ ಕೆಲವು ನುಡಿಮುತ್ತುಗಳು ಇಂತಿವೆ.

"ಎನ್ನದೆಂಬೋ ಮಾತು ಎಂದಿಗನ್ನ
ಅನ್ನಿಸಬೇಡ

* * * *

"ನಿನ್ನವನು ನಿನ್ನವನು ನಿನ್ನವನೆಂಬೋದು
ಅನಂತ ಕಾಲದಲ್ಲಿ ಅನ್ನಿಸಿ ಪ್ರೀತಿ ಬಡಿಸೊ"

* * * *

"ಹರಿಗರ್ಪಿಸದ ಕರ್ಮ ಆವಾವುವಾದರು
ಸೂಳೆಗಿಕ್ಕಿದ ವಿತ್ತ



ಹಂಗೆ ವಿಶ್ವಾಸದಿ ಅಣುಮಾತ್ರ ಅರ್ಪಿಸೆ
ಅವನೆ ನಿರ್ಮಲ ಚಿತ್ತ"

* * * *

"ಮಡದಿ ಮಕ್ಕಳು ನಿನ್ನಾಧೀನ,
ಒಡವೆ ವಸ್ತ್ರ ನಿನ್ನಾಧೀನ
ಬಡತನ ಭಾಗ್ಯ ನಿನ್ನಾಧೀನ
ಅಡಿಯಿಡುವುದು ನಿನ್ನಾಧೀನ"

* * * *

"ನೋಡಿದವೆಲ್ಲ ಶ್ರೀಹರಿಯ ಪ್ರತಿಮೆಗಳೆಂದು
ಆಡಿದವೆಲ್ಲ ಶ್ರೀ ಹರಿಯ ರೂಪವೆಂದು
ಮಾಡಿದವೆಲ್ಲ ಶ್ರೀ ಹರಿಯ ಸೇವೆಯೆಂದು
ಕೂಡಿದ್ದೆಲ್ಲ ಹರಿಭಕ್ತರೆಂದು"

* * * *

ಈ ನುಡಿಮುತ್ತಗಳಲ್ಲಿ ವೇದವೇದಾಂತಗಳು, ಉಪನಿಷತ್‌ಗಳು ಎತ್ತಿಹಿಡಿದ ತತ್ತ್ವಗಳನ್ನೇ ಸ್ಪಷ್ಟವಾಗಿ ಕಾಣಬಹುದಾಗಿದೆ ವಿಜಯದಾಸರು ತಾವು ಕಂಡುಂಡ ಭಾಗ್ಯವನ್ನೇ ಸರಳವಾದ ಮಾತುಗಳಲ್ಲಿ ತಮ್ಮ ಜೀವನದುದ್ದಕ್ಕೂ ಅಡಿ ಹಾಡಿದವರು. ಅವರ ಸಾಹಿತ್ಯದಲ್ಲಿ ಎಲ್ಲಿ ದೃಷ್ಟಿಯಿಸಿದರೂ ಅಲ್ಲಿ, ಆತ್ಮ ಪರಿಶೋಧನೆಯಲ್ಲಿ ಪರಮಾತ್ಮನಿಗೆ ಅರ್ಪಿತವಾದ ಸರ್ವ ಸಮರ್ಪಣಾ ಭಾವವೇ ಬುಗ್ಗೆಯಾಗಿ ಚಿಮ್ಮಿ ತ್ರಿಪಥಗೆಯಾಗಿ ಹರಿದಿದೆ. ನಂಬಿದವರನ್ನೆಲ್ಲ ಪಾವನಗೊಳಿಸುತ್ತ ಸಾಗಿದೆ.

ವಿಜಯದಾಸರ ಪರಂಪರೆಯಲ್ಲಿ ಬಂದ ಮತ್ತೊಬ್ಬ ಹೆಸರಾಂತ ದಾಸರು, ಗೋಪಾಲ

(29 ನೇ ಪುಟ ನೋಡಿ)

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ.

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಸಿ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8-30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ. ಶ್ರೀ ವೆಂಕಟೇಶ್ವರನ ಉದ್ದಾಮ ಭಕ್ತ, ಕವಿ ಅನ್ನಮಾಚಾರ್ಯರ ಅಂಚೆಚೀಟಿಯನ್ನು ಬಯಸುವವರು ಕೊಂಡುಕೊಳ್ಳಬಹುದು.

# ಭಾರತದಲ್ಲಿ ಮಹಾಭಾರತ ಕೃತಿಗಳು

ಭಾರತೀಯರ ಪರಮಪೂಜ್ಯನಾದ ಇತಿಹಾಸ ಮಹಾಭಾರತ. ಇದು ಭಾರತೀಯ ಸಂಸ್ಕೃತಿಯ ಮೂಲಸ್ತಂಭ. ಛಾಂದೋಗ್ಯ ಉಪನಿಷತ್ತೂ ಕೌಟಿಲ್ಯನ ಅರ್ಥಶಾಸ್ತ್ರವೂ ಇದನ್ನು 'ಪಂಚಮ ವೇದ' ಎಂದು ಕರೆದಿವೆ. ವಾಸ್ತವವಾಗಿ ಇದು ಪುರಾಣ, ಚರಿತ್ರೆ, ಕಥೆ, ಆಖ್ಯಾನ, ಉಪಾಖ್ಯಾನ ಧರ್ಮಶಾಸ್ತ್ರ, ಅರ್ಥಶಾಸ್ತ್ರ ಎಲ್ಲವೂ ಆಗಿದೆ. ಇದರ ಫಲಶ್ರುತಿಯಲ್ಲಿ ಹೇಳಿರುವಂತೆ 'ಇಲ್ಲಿ ಹೇಳಿರುವುದು ಬೇರೆಕಡೆ ಸಿಕ್ಕಬಹುದು ಇಲ್ಲಿ ಇಲ್ಲದ ವಿಷಯ ಬೇರೆಲ್ಲಿಯೂ ಇಲ್ಲ. 'ಯದಿ ಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ಕಿಂಚನ' ಹಾಗೆಯೇ ಅದರ ಮಹತ್ವ ಮತ್ತು ಬೃಹತ್ವದಿಂದ ಅದು ಮಹಾಭಾರತವಾಗಿದೆ. ಕನ್ನಡಭಾರತಕಾರನಾದ ಗದುಗಿನ ನಾರಣಪ್ಪನು ಇದು 'ಅರಸುಗಳಿಗೆ ವೀರ, ದ್ವಿಜರಿಗೆ ಪರಮ ವೇದದ ಸಾರ, ಯೋಗೀಶ್ವರರ ತತ್ತ್ವವಿಚಾರ, ಮಂತ್ರೀ ಜನಕೆ ಬುದ್ಧಿಗುಣ, ವಿರಹಿಗಳ ಶೃಂಗಾರ, ವಿದ್ಯಾಪರಿಣತರಲಂಕಾರ, ಕಾವ್ಯಕೆ ಗುರು' ಎಂದಿದ್ದಾನೆ ತೆಲುಗಿನ ಸುಪ್ರಸಿದ್ಧ ಭಾರತಕರ್ತನಾದ ನನ್ನಯ್ಯನು ಭಾರತವನ್ನು ಕುರಿತು ಹೀಗೆ ಹೇಳಿದ್ದಾನೆ. "ಧರ್ಮತತ್ತ್ವಜ್ಞರು ಇದನ್ನು ಧರ್ಮಶಾಸ್ತ್ರವೆಂದೂ ಆಧ್ಯಾತ್ಮವಿದರು ಇದು ವೇದಾಂತವೆಂದೂ ನೀತಿವೇತ್ತರು ಇದು ನೀತಿಶಾಸ್ತ್ರವೆಂದೂ ಕವೀಶ್ವರರೂ ಇದು ಮಹಾಕಾವ್ಯವೆಂದೂ ಲಾಕ್ಷಣಿಕರು ಇದು ಸರ್ವ ಲಕ್ಷ್ಯ ಸಂಗ್ರಹವೆಂದೂ ಐತಿಹಾಸಿಕರು ಇತಿಹಾಸವೆಂದೂ ಉತ್ತಮ ಪೌರಾಣಿಕರು ಇದು ಪುರಾಣಗಳ ಸಮುಚ್ಚಯವೆಂದೂ ಕೊಂಡಾಡಿರುವ ಹಾಗೆ ಇದು ವಿವಿಧ ತತ್ತ್ವವೇದಿ. ಪರಾಶರರ ಪುತ್ರರೂ ಮುನಿಗಳಲ್ಲಿ ಅಗ್ರಗಣ್ಯರೂ ವಿಷ್ಣು ಸಮಾನರಾದವರೂ ಆದ ವೇದವ್ಯಾಸರು ವಿಶ್ವ ಜನಗಳಿಗೆ ಹಿತವಾಗುವಂತೆ ಮಹಾಭಾರತವನ್ನು ರಚಿಸಿದ್ದಾರೆ". ಸುಪ್ರಸಿದ್ಧ ಪಾಶ್ಚಾತ್ಯ ಸಾಹಿತ್ಯ ಚರಿತ್ರೆಕಾರನಾದ ವಿಂಟರ್‌ನಿಟ್ಸ್ 'ಇದೊಂದು ಅದ್ಭುತಗ್ರಂಥ' ಎಂದಿದ್ದಾನೆ. ಈ ಗ್ರಂಥವನ್ನು ಜೀರ್ಣಿಸಿಕೊಳ್ಳುವುದಕ್ಕೆ ಒಂದು ಆಯಸ್ಸು ಸಾಲದು ಎಂಬುದು ವೇದವಿದ್ವಾಂಸನಾದ ಮ್ಯಾಕ್ಸ್‌ಮುಲ್ಲರನ ಅಭಿಪ್ರಾಯ. ಅಮೆರಿಕದ ಪ್ರೊ॥ ಎ. ಆರ್. ಆರೆಂಜ್ ಎಂಬ ವಿದ್ವಾಂಸನ ಮಾತಿದು:– "ಸಾಹಿತ್ಯದ ಮೂಲಕ ಸಂಸ್ಕೃತಿಯನ್ನು ಸೃಷ್ಟಿಮಾಡುವ ಪ್ರಯತ್ನಗಳಲ್ಲಿ 'ಮಹಾಭಾರತ'ವು ಮಾನವ ಇತಿಹಾಸದಲ್ಲಿಯೇ ಏಕೈಕವೂ ಅತ್ಯಂತ ಮಹತ್ವಪೂರಿತವೂ ಆಗಿದೆ. ಅದನ್ನು ರಚಿಸಿದ ಮಹಾಪುರುಷನ ಮೇಧಾಶಕ್ತಿಯನ್ನು ಅಳೆಯುವುದು ಎಂಥವರಿಗೂ ಸುಲಭವಲ್ಲ ಅದನ್ನು ಅರಿತುಕೊಳ್ಳಲು ಮಾಡುವ ಪ್ರಯತ್ನವೇ ಉದಾರವಾದ ಒಂದು ಅಭ್ಯಾಸವಾದೀತು. ಅದರ ವಿಷಯಾನುಕ್ರಮಣಿಯ ಪರಿಚಯವೇ ಸಾಕು, ಬಹುಮಹತ್ವಪೂರಿತವಾಗಿವೆ 'ಇಲಿಯಡ್', 'ಒಡಿಸ್ಸಿ'ಗಳು, ಅದರಲ್ಲಿನ ಉಪಕಥೆಗಳಿಗೆ ಸಮಾನ. 'ಭಗವದ್ಗೀತೆ'ಯಂತೂ ಯುದ್ಧಪೂರ್ವದಲ್ಲಿ ನಡೆದ ಒಂದು ಸಂಭಾಷಣೆ ಮಾತ್ರ. ನೂರಾರು ಪಾತ್ರಗಳು–ಘಟನೆಗಳಿವೆ. ಒಲಿತೆ ಘಟನೆ – ಅವುಗಳೂ ಅನಂತಕಾಲ ವ್ಯಾಪ್ತವಾದುವು ಅದನ್ನು ಕೇವಲ ಕಾವ್ಯವೆಂದು ಕರೆದರೂ ಅದರ ಬೃಹತ್ತು ಮಹತ್ತುಗಳು ಅಸ್ಪೃಶವಾದುವು. ಅದರಲ್ಲಿರುವ ಉದಾಹರಣೆಗಳೂ ಉಪದೇಶಗಳೂ ಕಾಲದಲ್ಲಿ ಅನಂತ ವಿಸ್ತಾರವಾಗಿ ಬೆಳೆದಿವೆ. ಇದರ ಪಠನದಿಂದ ಮಾನವನು ಸತ್ಯಾನುಭವದಿಂದ ಹೇಗೋ ಹಾಗೆ ಬೇರೊಬ್ಬ ವ್ಯಕ್ತಿಯೇ ಆಗುತ್ತಾನೆ".

ಒಂದು ಲಕ್ಷ ಗ್ರಂಥ ಪರಿಮಿತಿಯುಳ್ಳ ಈ ಗ್ರಂಥದಷ್ಟು ಬೃಹತ್ಪ್ರಮಾಣದ ಗ್ರಂಥರಚನೆ ಪ್ರಪಂಚದ ಇನ್ನಾವ ಭಾಷೆಯಲ್ಲಿಯೂ ಆಗಿಲ್ಲ. ಇದು ಪ್ರಾಚೀನ ಭಾರತದ ನಾಗರಿಕತೆಯ ಏಕೈಕ ಪ್ರತೀಕ ಭರತವಂಶದ ರಾಜರುಗಳಾದ ಕೌರವ ಪಾಂಡವರ ಕತೆ ಇದರ ವಸ್ತುವಾದರೂ ಇದರಲ್ಲಿ ರಾಜರು, ದೇವತೆಗಳು, ಋಷಿಗಳು ಮೊದಲಾದವರ ವಿವಿಧ ಚರಿತ್ರೆಗಳು ಉಕ್ತವಾಗಿವೆ. ಆನುಷಂಗಿಕವಾಗಿ ವಿಶ್ವಸೃಷ್ಟಿ, ಧರ್ಮ, ಮತ ದರ್ಶನ, ವರ್ಣಾಶ್ರಮ ಪುರುಷಾರ್ಥ ಮೊದಲಾದುವು ವಿಸ್ತಾರವಾಗಿ ವರ್ಣಿತವಾಗಿವೆ.

೨೧೦೯ ಅಧ್ಯಾಯಗಳಿಂದ ಕೂಡಿದ ಮಹಾಭಾರತದಲ್ಲಿ ಆದಿ, ಸಭಾ, ವನ, ವಿರಾಟ, ಉದ್ಯೋಗ, ಭೀಷ್ಮ, ದ್ರೋಣ, ಕರ್ಣ, ಶಲ್ಯ, ಸೌಪ್ತಿಕ, ಸ್ತ್ರೀ, ಶಾಂತಿ, ಆನುಶಾಸನಿಕ, ಮೌಸಲ, ಮಹಾಪ್ರಸ್ಥಾನ, ಸ್ವರ್ಗಾರೋಹಣ ಎಂಬ ೧೮ ಪರ್ವಗಳಿವೆ. ೧೨೦೦೦ ಗ್ರಂಥ ಪರಿಮಿತಿಯಿರುವ ಇದರ ಅನುಬಂಧವಾದ ಹರಿವಂಶವೂ ಸೇರಿ ಒಂದು ಲಕ್ಷ ಗ್ರಂಥಪರಿಮಾಣ ಉಳ್ಳದ್ದಾಗಿದೆ. ಇದಕ್ಕೆ 'ಶತಸಾಹಸ್ರಿ' ಎಂಬ ಹೆಸರೂ ಉಂಟು.

ಈ ೧೮ ಪರ್ವಗಳಲ್ಲಿ ಕ್ರಮವಾಗಿ ಕೌರವ ಪಾಂಡವರಜನನ, ವಿದ್ಯಾಭ್ಯಾಸ, ದ್ರೌಪದೀ ಸ್ವಯಂವರ, ಅಕ್ಷಕ್ರೀಡೆ, ದ್ರೌಪದೀವಸ್ತ್ರಾಪಹರಣ ಭೀಮಸೇನನ ಊರು ಭಂಗ ಪ್ರತಿಜ್ಞೆ, ಪಾಂಡವರ ಅರಣ್ಯವಾಸ, ಅರ್ಜುನನಿಂದ ಪಾಶುಪತಾಸ್ತ್ರ ಸಂಪಾದನೆ, ಪಾಂಡವರ ಅಜ್ಞಾತವಾಸ, ಉತ್ತರ ಗೋಗ್ರಹಣ, ಕೃಷ್ಣದೌತ್ಯ, ಉಭಯಪಕ್ಷಗಳ ಯುದ್ಧಸನ್ನದ್ಧತೆ, ಭಗವದ್ಗೀತೋಪದೇಶ, ಭೀಷ್ಮರ ಸೇನಾಪತ್ಯಾಭಿಷೇಕ, ಯುದ್ಧ–ಪತನ; ದ್ರೋಣಾಚಾರ್ಯನ ಯುದ್ಧ, ಪದ್ಮವ್ಯೂಹ ರಚನೆ, ಅಭಿಮನ್ಯು ಮರಣ, ದ್ರೋಣಾವಸಾನ. ಕರ್ಣನ ಸೇನಾಧಿಪತ್ಯ, ಕರ್ಣಾರ್ಜುನರ ಕಾಳಗ ಮತ್ತು ಕರ್ಣನ ಮರಣ, ಶಲ್ಯನ ಯುದ್ಧ ಮತ್ತು ಸಾವು, ಭೀಮ ದುರ್ಯೋಧನರ ಗದಾಯುದ್ಧ, ದುರ್ಯೋಧನನ ಊರುಭಂಗ ಉಪಪಾಂಡವರ ಕೊಲೆ, ಕೌರವ ಸ್ತ್ರೀಪ್ರಲಾಪ, ಧರ್ಮರಾಜ ಪಟ್ಟಾಭಿಷೇಕ, ಭೀಷ್ಮರಿಂದ ಯುಧಿಷ್ಠಿರನಿಗೆ ರಾಜಧರ್ಮ, ಆಪದ್ಧರ್ಮ, ಮೋಕ್ಷಧರ್ಮ, ಲೋಕನೀತಿ, ರಾಜನೀತಿ, ವ್ರತಾದಿ ನಿಯಮಗಳ ಉಪದೇಶ, ಭೀಷ್ಮಾವಸಾನ, ಯುಧಿಷ್ಠಿರನ ಅಶ್ವಮೇಧಯಾಗ, ಧೃತರಾಷ್ಟ್ರನ ವಾನಪ್ರಸ್ಥಾಭಿಗಮನ ಮತ್ತು ಮರಣ, ಕೃಷ್ಣಬಲರಾಮರ ಅಂತ್ಯ ಯಾದವೀಕಲಹ ಮತ್ತು ನಾಶ, ಪಾಂಡವರ ರಾಜ್ಯತ್ಯಾಗ, ದ್ರೌಪದೀಸಹಿತ ಸ್ವರ್ಗಾರೋಹಣ ಮೊದಲಾದುವು ವಿಸ್ತಾರವಾಗಿ ವರ್ಣಿತವಾಗಿವೆ

ಹರಿವಂಶ ಸಹಿತವಾದ ಭಾರತವನ್ನು ವೇದವ್ಯಾಸರೇ ಪಾಂಡವರು ಜೀವಂತರಾಗಿರುವ ಕಾಲದಲ್ಲಿ ದ್ವಾಪರಾಂತ್ಯದಲ್ಲಿ ರಚಿಸಿದರೆಂಬುದು ಸಂಪ್ರದಾಯಾಭಿಪ್ರಾಯ.

ಆದರೆ ಒಂದುನೂರು ಅಯ್ವತ್ತು ವರ್ಷದ ಪೌರಸ್ತ್ಯ ಮತ್ತು ಪಾಶ್ಚಾತ್ಯ ವಿದ್ವಾಂಸರ ಸಂಶೋಧನೆಯು ಫಲವಾಗಿ ಮಹಾಭಾರತವು ಏಕ ಕರ್ತೃಕವೂ ಏಕಕಾಲದಲ್ಲಿ ರಚಿತವಾದದ್ದೂ ಅಲ್ಲವೆಂದು ಅಂಗೀಕೃತವಾಗಿದೆ. ಕಾಲ ಕಾಲಕ್ಕೆ ಮೂಲವಸ್ತುವಿನೊಡನೆ ಅನೇಕ ಪ್ರಕ್ಷಿಪ್ತಗಳು ಸೇರಿಕೊಂಡು ವಿಸ್ತಾರವಾಗುತ್ತ ಬೆಳೆದಿದೆ. ಈಗಿನ ಬಹುಮತದ ಪ್ರಕಾರ ಅದು ಕ್ರಿ.ಪೂ. ೪೦೦ನೆಯ ವರ್ಷದಿಂದ ಕ್ರಿ. ಶ. ೪೦೦ನೆಯ ವರ್ಷದ

ಡಾ॥ ಎನ್. ಅನಂತರಂಗಾಚಾರ್

ಮಧ್ಯದ ೮೦೦ ವರ್ಷಗಳ ಅವಧಿಯಲ್ಲಿ ಈಗಿನ ರೂಪವನ್ನು ತಾಳಿರಬೇಕು. ಮೂಲವಸ್ತುವಿನೊಡನೆ ಲೆಕ್ಕವಿಲ್ಲದಷ್ಟು ಕಾವ್ಯೇತರ ವಿಷಯಗಳು ಸೇರ್ಪಡೆಗೊಂಡಿವೆ. ಭಿನ್ನಭಿನ್ನ ವಿಚಾರ ಪರಂಪರೆಗಳೂ ಸಂಪ್ರದಾಯಗಳೂ ಸೇರಿಕೊಂಡಿವೆ. ಮೂಲ ಮತ್ತು ಪ್ರಕ್ಷೇಪಗಳನ್ನು ಬೇರ್ಪಡಿಸಲು ಸಾಧ್ಯವಿಲ್ಲವಾಗಿದೆ ಅದು ಒಂದು ಪ್ರಾಚೀನ ಭಾರತೀಯ ವಿಶ್ವಕೋಶ. ಸಕಲ ವಿದ್ಯಾಸಾರ ಸಂಗ್ರಹ, ಚರಿತ್ರೆ, ಭೂಗೋಳ, ವೇದಾಂತ, ತತ್ತ್ವ, ನೀತಿ, ಸಮಾಜಶಾಸ್ತ್ರ, ವಿಜ್ಞಾನ, ರಾಜನೀತಿ, ಧರ್ಮಕಥೆ ಇತ್ಯಾದಿಗಳು ಅಲ್ಲಿ ಅಡಕವಾಗಿವೆ. ಕಾವ್ಯದೃಷ್ಟಿಯಿಂದ ಇದೊಂದು ಕಾವ್ಯಮಂಜರಿ, ಇದರಲ್ಲಿರುವ ಒಂದೊಂದು ಉಪಾಖ್ಯಾನವೂ ಒಂದೊಂದು ಸ್ವತಂತ್ರ ಕಾವ್ಯವೇ ಆಗಿದೆ.

ಈಗಿನ ಮಹಾಭಾರತವು ಜಯ, ಭಾರತ ಮತ್ತು ಮಹಾಭಾರತ ಎಂಬ ಮೂರು ಹಂತಗಳಲ್ಲಿ ಬೆಳೆದಿರಬೇಕು ಅವುಗಳು ಕ್ರಮವಾಗಿ ೮೮೦೦, ೨೪೦೦೦ ಮತ್ತು ಒಂದು ಲಕ್ಷ ಗ್ರಂಥ ಪ್ರಮಾಣದವಾಗಿರಬಹುದು

ಆದುದರಿಂದ ಪ್ರಸಕ್ತ ಮಹಾಭಾರತವೂ ಏಕ ಕರ್ತೃಕವೂ ಅಲ್ಲ. ಏಕಕಾಲದಲ್ಲಿ ರಚಿತವಾದುದೂ ಅಲ್ಲ. ಅದು ಒಂದು ಗ್ರಂಥವಲ್ಲ. ಒಂದು ಸಂಪೂರ್ಣಸಾಹಿತ್ಯ. ಬಹುದೀರ್ಘಕಾಲಕ್ಕೆ ಸೇರಿದುದು.

ದಾರ್ಶನಿಕ ದೃಷ್ಟಿಯಿಂದ ಬಹುಮುಖ್ಯವಾದ ಭಾಗ ಅದರ ಭಾಗವಾಗಿರುವ ಭಗವದ್ಗೀತೆ. ಅದು ಭೀಷ್ಮಪರ್ವದ ಒಂದುಭಾಗ. ಕಳೆದ ನೂರೈವತ್ತು ವರ್ಷಗಳಿಂದ ಅದು ಭಾರತೀಯರು ಮತ್ತು ಇತರರಿಂದ ಅನೇಕಸಲ ಅಭ್ಯಸ್ತನಾಗಿ, ಮುದ್ರಿತವಾಗಿ, ವ್ಯಾಖ್ಯಾತವಾಗಿ ವಿಮರ್ಶಿತವಾಗಿ ಭಾಷಾಂತರಿತವಾಗಿ, ಉಪನ್ಯಸ್ತವಾಗಿ ಭಾರತೀಯರ ಜೀವನದಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡಿದೆ. ಇದು ಕೃಷ್ಣಪರಮಾತ್ಮನಿಂದ ಉಪದಿಷ್ಟವಾಗಿದೆ. ೧೮ ಅಧ್ಯಾಯಗಳನ್ನುಳ್ಳದಾಗಿದೆ. ಭಾಗವತ ಧರ್ಮದ ಪ್ರಪ್ರಾಚೀನವಾದ ಪ್ರತಿಪಾದನೆ ಇದರಲ್ಲಿದೆ ಇದಕ್ಕೆ ಅಸಂಖ್ಯಾತ ವ್ಯಾಖ್ಯಾನಗಳಿವೆ.

ಭಾರತದ ಅನುಬಂಧವಾದ 'ಹರಿವಂಶ'ವು ಮೂರುಪರ್ವಗಳನ್ನುಳ್ಳ ವೈಷ್ಣವ ಪಾರಮ್ಯವನ್ನು ನಿರೂಪಿಸುವ ಗ್ರಂಥ, ಇದರಲ್ಲಿ ಕೃಷ್ಣನ ಅದ್ಭುತ ಚರಿತ್ರೆ, ಬಾಲಲೀಲೆಗಳ ವರ್ಣನೆಯಿದೆ-

ಭಾರತವೆಂಬ ಹೆಸರಿನಿಂದ ಭರತವಂಶದ ರಾಜ ಧರ್ಮರಾಯಾದಿಗಳು ಮಹಾಭಾರತದ ನಾಯಕರಂತೆ ತೋರಿಬಂದರೂ ಅದರ ನಿಜವಾದ ನಾಯಕ ಶ್ರೀಕೃಷ್ಣ. ಅವನೇ ಮಹಾಭಾರತದ ಎಲ್ಲ ಕಾರ್ಯಗಳಿಗೂ ಸೂತ್ರಧಾರ, ಪ್ರೇರಕ ಶಕ್ತಿ, ಅವನ ಕಾರ್ಯ, ಅವನ ಚಾಕಚಕ್ಯ ಅವನ ಧ್ಯೇಯ ಸಾಧನೆಗಳ ವರ್ಣನಾರೂಪವಾದ ಕಾವ್ಯವೇ ಮಹಾಭಾರತ. ಭೂತ ಭವಿಷ್ಯತ್ತುಗಳ ಸಮನ್ವಯಾಚಾರ್ಯನವನು ದುಷ್ಟಶಿಕ್ಷಣ ಮತ್ತು ಶಿಷ್ಟರಕ್ಷಣ ದ್ವಾರಾ ಶಾಂತಿಪ್ರಧಾನವಾದ ಮೋಕ್ಷಸಾಧನೋಪಾಯವನ್ನು ಜಗತ್ತಿಗೆ ಉಪದೇಶಿಸುವುದೇ ಅವನ ಪರಮಧ್ಯೇಯ.

ಇಂತಹ ಸರ್ವವಿಷಯ–ಸಂಗ್ರಹವಾದ ಭಾರತ ತೀರ್ಥದಲ್ಲಿ ಮಿಂದು ಪುನೀತರಾದವರು ಬಹುಮಂದಿ ಭಾರತದ ಪೂರ್ಣವಸ್ತು, ಭಾವಗಳು ಉಪಾಖ್ಯಾನಗಳು ಮೊದಲಾದುವುಗಳ ಆಧಾರದ ಮೇಲೆ ಮುಂದಿ ಅನೇಕರು ಗ್ರಂಥಗಳನ್ನು ರಚಿಸಿದ್ದಾರೆ. ಸಂಸ್ಕೃತ ಭಾಷೆಯಲ್ಲಿಯೇ ಕಾವ್ಯಗಳನ್ನು ರಚಿಸಿದ ಮಾಘ (ಶಿಶುಪಾಲವಧ) ಭಾರವಿ (ಕಿರಾತಾರ್ಜುನೀಯ) ವಾಮನಭಟ್ಟ ಬಾಣ (ನಳಾಭ್ಯುದಯ), ಅಗಸ್ತ್ಯ (ಬಾಲಭಾರತ) ಕ್ಷೇಮೇಂದ್ರ (ಭಾರತಮಂಜರಿ) ಚಿದಂಬರ (ರಾಘವಪಾಂಡವೀಯ) ವೆಂಕಟಾಧ್ವರಿ (ರಾಘವ ಪಾಂಡವೀಯ) ಮೊದಲಾದವರನ್ನೂ ನಾಟಕಕಾರರಾದ ಭಾಸ (ಪಂಚರಾತ್ರ, ಮಧ್ಯಮ ವ್ಯಾಯೋಗ, ಕರ್ಣಭಾರ, ದೂತವಾಕ್ಯ, ಊರುಭಂಗ) ಭಟ್ಟನಾರಾಯಣ (ವೇಣೀಸಂಹಾರ) ರಾಜಶೇಖರ (ಬಾಲಭಾರತ) ಕ್ಷೇಮೀಶ್ವರ (ನೈಷದಾನಂದ) ಮೊದಲಾದವರನ್ನು ಚಂಪೂಕರ್ತೃಗಳಾದ ತ್ರಿವಿಕ್ರಮಭಟ್ಟ (ನಳಚಂಪು) ಅನಂತ ಭಟ್ಟ, ಚಂದ್ರಚೂಡಾಮಣಿ ದೀಕ್ಷಿತ (ಭಾರತ ಚಂದ್ರ) ಮೊದಲಾದವರನ್ನು ಹೆಸರಿಸಬಹುದು.

ಮಹಾಭಾರತಕ್ಕೆ ಅನೇಕರು ವ್ಯಾಖ್ಯಾನಗಳನ್ನು ರಚಿಸಿದ್ದಾರೆ ಅವರಲ್ಲಿ ಆನಂದತೀರ್ಥ, ಸರ್ವಜ್ಞನಾರಾಯಣ, ಅರ್ಜುನಮಿಶ್ರ, ನೀಲಕಂಠ ಇವರು ಪ್ರಸಿದ್ಧರು.

ಭಾರತೀಯ ದೇಶಭಾಷೆಗಳಲ್ಲಿ ಸಂಬಂಧಪಟ್ಟ ಕೃತಿಗಳು ಅಸಂಖ್ಯಾಕವಾಗಿವೆ ಅವುಗಳಲ್ಲಿ ಅನೇಕವು ಮೂಲ ಸಂಸ್ಕೃತ ವ್ಯಾಸಭಾರತದ ಭಾಷಾಂತರಗಳು, ಕೆಲವು ಸಂಗ್ರಹಗಳು, ಕೆಲವು ಅಳವಡಿಕೆಗಳು, ಕೆಲವು ರೂಪಾಂತರಗಳು, ಕೆಲವು ಭಾರತದ ಭಾಗಗಳಿಗೆ ಸಂಬಂಧಪಟ್ಟವು. ಹಲವು ಪದ್ಯರೂಪದಲ್ಲಿವೆ, ಕೆಲವು ಗದ್ಯರೂಪದಲ್ಲಿವೆ, ಅನೇಕವು ನಾಟಕಗಳು. ಆದಿಯಿಂದ ಇಲ್ಲಿಯವರೆಗೆ ಭಿನ್ನ ಭಿನ್ನ ರೀತಿಯಲ್ಲಿ ರಚಿತವಾಗಿವೆ. ಅವುಗಳೆಲ್ಲವನ್ನು ಹೆಸರಿಸುವುದೂ ಅಸಾಧ್ಯವಾದ ಕೆಲಸ. ಆದುದರಿಂದ ಅವುಗಳಲ್ಲಿ ವಿಶೇಷ ಪರಿಚಯವಾಗಿರುವ ಜನಪ್ರಿಯವಾಗಿರುವುವನ್ನು ಮಾತ್ರ ಗಮನಿಸಬಹುದು.

ಮಹಾಭಾರತದ ಕಥೆಯನ್ನು ಮೊದಲು ತಮ್ಮ ಧರ್ಮಾನುಗುಣವಾಗಿ ಅಳವಡಿಸಿಕೊಂಡವರು ಜೈನರು. ಆದಿಕಾಲದ ಇವರ ಗ್ರಂಥಗಳು ಪ್ರಾಕೃತ ಅಪಭ್ರಂಶ ಮತ್ತು ಸಂಸ್ಕೃತ ಭಾಷೆಗಳಲ್ಲಿ ರಚಿತವಾಗಿವೆ. ವೈದಿಕಸಂಪ್ರದಾಯದ ಭಾರತಕಥೆಯು ಜೈನಸಂಪ್ರದಾಯದಲ್ಲಿ ಹೇಗೆ ರೂಪುಗೊಂಡಿದೆಯೆಂಬುದನ್ನು ತಿಳಿಯಬೇಕಾದರೆ ಜೈನರ ೨೨ನೆಯ ತೀರ್ಥಂಕರನಾದ ನೇಮಿಜಿನೇಶನಿಗೆ ಸಂಬಂಧಪಟ್ಟ ಕೃತಿಗಳನ್ನು ಆಶ್ರಯಿಸಬೇಕು. ಜೈನರು ಹರಿವಂಶ ಕುರುವಂಶಗಳ ಕಥೆಯನ್ನು ನೇಮಿಯ ಕಥೆಯೊಡನೆ ಸಮನ್ವಯಗೊಳಿಸಿ ನಿರೂಪಿಸಿದ್ದಾರೆ. ಈ ಕಥೆಯು ಸಾಮಾನ್ಯವಾಗಿ ಜೈನರ 'ಹರಿವಂಶ' ಮತ್ತು 'ಮಹಾಪುರಾಣ'ಗಳಲ್ಲಿ ಸಿಕ್ಕುತ್ತವೆ. ಇವುಗಳು ಪ್ರಾಕೃತ ಮತ್ತು ಸಂಸ್ಕೃತಭಾಷೆಗಳಲ್ಲಿ ರಚಿತವಾಗಿವೆ. ಬಹುಶಃ ಅವುಗಳಿಗೆ ವೈದಿಕ ಸಂಪ್ರದಾಯದ ಭಾರತ ಭಾಗವತಗಳೇ ಮೂಲವಿರಬೇಕು. ಈ ಕಥೆಗಳನ್ನು ಜೈನರು ತಮ್ಮ ಧರ್ಮದ ಆಯಕಟ್ಟಿನಲ್ಲಿ ಅಳವಡಿಸಿಕೊಂಡು 'ಭಾರತ'ಕ್ಕೆ ಒಂದು ಹೊಸ ರೂಪವನ್ನು ಕೊಟ್ಟಿದ್ದಾರೆ ಜೈನರ ಆದಿಕಾಲದ ಕೂಚಿಭಟ್ಟಾರಕ, ನಂದಿಮುನಿ ಮತ್ತು ಕವಿ ಪರಮೇಷ್ಠಿಗಳ ಹರಿವಂಶಗಳು ಉಪಲಬ್ಧವಿಲ್ಲ. ಮಹಾಪುರಾಣಗಳಲ್ಲಿ ನೇಮಿಭಟ್ಟಾರಕರ ಕಥೆಯ ಅಂಗವಾಗಿ ಕುರುವಂಶದ ಕಥೆ ಬರುತ್ತದೆ ಹರಿವಂಶಪುರಾಣ ಕರ್ತೃಗಳಲ್ಲಿ ಪ್ರಾಕೃತ ಭಾಷೆಯ ಶೀಲಾಂಕ (ಚಪ್ಪನ್ನಮಹಾಪುರುಷ ಚರಿಯ) ಪುಷ್ಪದಂತ (ಮಹಾಪುರಾಣ) ಹೇಮಚಂದ್ರರನ್ನು, ಸಂಸ್ಕೃತ ಗ್ರಂಥಕಾರರಾದ ಜಿನಸೇನ (ಹರಿವಂಶ) ಮತ್ತು ಗುಣಭದ್ರಾಚಾರ್ಯ (ಉತ್ತರ ಪುರಾಣ)ರನ್ನು ಸೂಚಿಸಬಹುದು. ಅಪಭ್ರಂಶದಲ್ಲಿರುವ ಚತುರ್ಮುಖ ಸ್ವಯಂಭುವಿನ 'ರಿಠ್ಠನೇಮಿಯ ಚರಿಯು'ವೂ ಇದೇ ವಿಷಯಕವಾದುದು. ಇವುಗಳಲ್ಲೆಲ್ಲ ಕುರುವಂಶದ ಕಥೆಯು ಉಕ್ತವಾಗಿದೆ. ಇವುಗಳಲ್ಲದೆ ಜೈನಧರ್ಮಾನುಯಾಯಿಗಳಾದ ಕುರುವಂಶಕಥೆಗಳೂ ಇವೆ. ಅವುಗಳಿಗೆ 'ಪಾಂಡವ ಪುರಾಣ'ವೆಂದು ಹೆಸರು. ಈ ಮಾದರಿಯ ಕಥೆಯನ್ನು ಬರೆದವರಲ್ಲಿ ವಿಜಯಗಣಿ, ದೇವಪ್ರಭಾ ಸೂರಿಗಳು ಮುಖ್ಯರು. ಜೈನಸಂಪ್ರದಾಯದ ಭಾರತಕಥೆಗಳಲ್ಲಿ ಪಾತ್ರರಚನೆ, ಕಥಾಸ್ವರೂಪ ಮತ್ತು ಧ್ಯೇಯಗಳು ವ್ಯಾಸಭಾರತ ಸಂಪ್ರದಾಯಕ್ಕೆ ಬಹುಮಟ್ಟಿಗೆ ಭಿನ್ನವಾಗಿರುತ್ತವೆ.

ತಮಿಳು ಭಾಷೆಯಲ್ಲಿ ೧೦ನೆಯ ಶತಮಾನದಲ್ಲಿ ರಚಿತವಾದ ಪೆರುಂದೇವನಾರರ ತಮಿಳು ಮಹಾಭಾರತವೂ ೧೪ನೆಯ ಶತಮಾನದಲ್ಲಿ ರಚಿತವಾದ ವಿಲ್ಲಿಪುತ್ತೂರಾರರ ಭಾರತವೂ ಪ್ರಸಿದ್ಧವಾಗಿವೆ. ವಿಲ್ಲಿಪುತ್ತೂರಾರರ ಭಾರತವು ತಮಿಳು ಭಾಷೆ

ಯಲ್ಲಿರುವ ಇತರ ಭಾರತಗಳಿಗಿಂತ ರಸವತ್ತಾದುದು. ಹಾಗೆಯೇ ಶ್ರೇಷ್ಠವಾದುದು. ಇದರ ಶೈಲಿಯು ಆಕರ್ಷಕವಾಗಿದೆ. ಮೂಲವನ್ನು ಬಹು ಮಟ್ಟಿಗೆ ಅನುಸರಿಸಿದೆ ವಿಲ್ಲಿಪುತ್ತೂರಾರರ ಭಾರತಕ್ಕೆ ಅವರ ಅನಂತರ ಬಂದ ನಲ್ಲವಿಳ್ಳಿ ಎಂಬುವನು ಹತ್ತು ಸಾವಿರ ಪದ್ಯಗಳನ್ನು ಸೇರಿಸಿ ವಿಸ್ತರಿಸಿದ್ದಾನೆ

ಕನ್ನಡದಲ್ಲಿ ಕುಮಾರವ್ಯಾಸನು 'ತಿಣಿಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ' ಎಂದು ಉದ್ಗಾರತೆಗೆದಿದ್ದರೂ ಭಾರತದ ಕೃತಿಗಳಿಗೆ ಕೊರತೆಯೇನೂ ಇಲ್ಲ. ಇಲ್ಲಿ ಜೈನ ಮತ್ತು ವೈದಿಕ ಸಂಪ್ರದಾಯಗಳ ಭಾರತಕೃತಿಗಳೂ ವಿಪುಲವಾಗಿವೆ. ಕನ್ನಡದ ಮೊದಲನೆಯ ಕಾವ್ಯ (ಉಪಲಬ್ಧವಲ್ಲದಿದ್ದರೂ) ಒಂದನೆಯ ಗುಣವರ್ಮನ 'ಹರಿವಂಶ'. ಈತನು ಹತ್ತನೆಯ ಶತಮಾನದ ಆದಿಕಾಲದವನು. ಈ ಶತಮಾನಾಂತ್ಯದಲ್ಲಿ ಚಾಮುಂಡರಾಯನು ತನ್ನ 'ತ್ರಿಷಷ್ಟಿ ಶಲಾಕಾ ಪುರುಷಪುರಾಣಾ'ಂತರ್ಗವಾದ ನೇಮಿಭಟ್ಟಾರಕರ ಕಥೆಯಲ್ಲಿ ಕುರುವಂಶದ ಕಥೆಯನ್ನು ನಿರೂಪಿಸಿದ್ದಾನೆ. ಮುಂದೆ ೧೩ನೆಯ ಶತಮಾನದಲ್ಲಿ ಕರ್ಣಪಾರ್ಯ ಮತ್ತು ನೇಮಿಚಂದ್ರರು ನೇಮಿನಾಥಪುರಾಣಗಳನ್ನು ರಚಿಸಿದ್ದಾರೆ. ಸಾಳುವನ ಭಾರತವೂ ಈ ಸಂಪ್ರದಾಯಕ್ಕೇ ಸೇರಿದುದು. ಮುಂದೆ ರಚಿತವಾದ ಬಂಧುವರ್ಮನ 'ಹರಿವಂಶಾಭ್ಯುದಯ'ದಲ್ಲಿಯೂ ಮಂಗರಸನ 'ನೇಮಿಜಿನೇಶ ಸಾಂಗತ್ಯ'ದಲ್ಲಿಯೂ ಕುರುವಂಶದ ಕಥೆಯೂ ಉಕ್ತವಾಗಿದೆ.

ಹತ್ತನೆಯ ಶತಮಾನದ ಮಧ್ಯಭಾಗದಲ್ಲಿ ಜೈನನಾದ ಪಂಪನು 'ವಿಕ್ರಮಾರ್ಜುನವಿಜಯ' ಅಥವಾ 'ಪಂಪಭಾರತ'ವನ್ನು ರಚಿಸಿದನು. ಅವನು ತನ್ನ ಕಾವ್ಯದಲ್ಲಿ 'ವ್ಯಾಸಮುನೀಂದ್ರ ರುಂದ್ರ ವಚನಾಮೃತವಾರ್ಧಿಯನೀಸುವೆಂ' ಎಂದು ಹೇಳಿರುವುದರಿಂದ ಅದು ವ್ಯಾಸ ಸಂಪ್ರದಾಯದ್ದೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. 'ಸಮಸ್ತ ಭಾರತಮನಪೂರ್ವವಾಗಿ ಪೇಳ್ದ ಕವಿಗಳಿಲ್ಲ' ಎಂದು ಹೇಳಿರುವುದರಿಂದ ಅವನಿಗೆ ಹಿಂದೆ ಇತರ ಭಾರತಗಳೂ ಇದ್ದಿರಬೇಕು. 'ಕವಿವ್ಯಾಸನೆಂಬ ಗರ್ವಮೆನಗಿಲ್ಲ' ಎಂಬ ವಾಕ್ಯದಿಂದ ಅವನಿಗೆ ಹಿಂದೆ ಕವಿವ್ಯಾಸನೆಂಬುವನೂ ಭಾರತವನ್ನು ರಚಿಸಿರಬೇಕು. ಇವುಗಳ ಸ್ವರೂಪವೆಂತಹುದೆಂದು ಹೇಳಲು ಬರುವುದಿಲ್ಲ. ಪಂಪನಕೃತಿ ರಚನಾದೃಷ್ಟಿ ಮಾತ್ರ ಲೌಕಿಕ. ತನ್ನ ಆಶ್ರಯದಾತನಾದ ಅರಿಕೇಸರಿಯ ಕೀರ್ತಿಪ್ರಸಾರಣವೇ ಪ್ರಧಾನಧ್ಯೇಯ. ಕಥೆಯು ವೈದಿಕ ಸಂಪ್ರದಾಯದ್ದಾದರೂ ಅಲ್ಲಲ್ಲಿ ಜೈನಪ್ರಭಾವವನ್ನು ಕಾಣಬಹುದು.

ಪಂಪನನ್ನನುಸರಿಸಿ ಈ ಶತಮಾನಾಂತ್ಯದಲ್ಲಿ ರನ್ನನು ಮಹಾಭಾರತದ ಏಕದೇಶವಾದ ಭೀಮ ದುರ್ಯೋಧನರ ಗದಾಯುದ್ಧ ವಸ್ತುವನ್ನುಳ್ಳ 'ಸಾಹಸಭೀಮವಿಜಯ' ಅಥವಾ 'ಗದಾಯುದ್ಧ'ವನ್ನು ರಚಿಸಿದ್ದಾನೆ ಮೂಲಭಾರತದ ನಾಯಕ ಧರ್ಮರಾಯ, ಪಂಪನ ನಾಯಕ ಅರ್ಜುನ, ಗದಾಯುದ್ಧದ ನಾಯಕ ಸಾಹಸಭೀಮ

೧೫ನೆಯ ಶತಮಾನದಲ್ಲಿ ಗದುಗಿನ ನಾರಣಪ್ಪನು (ಕುಮಾರವ್ಯಾಸ) ಭಾರತವನ್ನು ಭಾಮಿನೀಷಟ್ಪದಿಯಲ್ಲಿ ರಚಿಸಿದನು. ಅವನೇ ಹೇಳಿಕೊಂಡಿರುವಂತೆ ಅದು ಕೃಷ್ಣ ಚರಿತೆ. ಕೃಷ್ಣನೇ ಅದರ ನಾಯಕ. ಇದು ಕನ್ನಡದಲ್ಲಿ ಬಹು ಜನಪ್ರಿಯವಾದ ಭಾರತ ಇದರಲ್ಲಿ ಮೊದಲು ಹತ್ತು ಪರ್ವಗಳ ಕಥೆ ಮಾತ್ರ ಉಕ್ತವಾಗಿದೆ ಉಳಿದ ೮ ಪರ್ವಗಳು ವಿಜಯನಗರದ ಕೃಷ್ಣದೇವರಾಯನ ಕಾಲದಲ್ಲಿ ತಿಮ್ಮಣ್ಣ ಕವಿಯಿಂದ ರಚಿತವಾಗಿವೆ. ಹದಿನೇಳನೆಯ ಶತಮಾನದಲ್ಲಿ ಲಕ್ಷ್ಮೀಶನು 'ಜೈಮಿನಿ ಭಾರತ'ವನ್ನು ರಚಿಸಿದ್ದಾನೆ. ಇದು ಗದುಗಿನ ಭಾರತದಂತೆಯೇ ಬಹುಜನಪ್ರಿಯವಾಗಿದೆ

ಮುಂದೆ ಚಿಕ್ಕದೇವರಾಜ (ಶಾಂತಿಪರ್ವ ಮಾತ್ರ) ಚಿಕ್ಕಭೂಪಾಲ (ಭಾರತಸಂಗ್ರಹ) ಮುಮ್ಮುಡಿ ಕೃಷ್ಣರಾಜ (ವಾಣೀವಿಲಾಸ ಮಹಾಭಾರತ) ದೇವಶಿಖಾಮಣಿ ಅಳಿಯ ಸಿಂಗರಾಚಾರ್ಯ, ಎ.ಆರ್. ಕೃಷ್ಣಶಾಸ್ತ್ರಿ, ಇವರು ಭಾರತಗಳನ್ನು ರಚಿಸಿದ್ದಾರೆ. ಇವೆಲ್ಲ ಗದ್ಯರೂಪದಲ್ಲಿವೆ. ಕೃಷ್ಣರಾಜ ಮತ್ತು ಅಳಿಯಸಿಂಗರಾಚಾರ್ಯರ ಭಾರತಗಳ ಮೂಲಭಾರತದ ಸಂಪೂರ್ಣ ಅನುವಾದ. ಶಾಸ್ತ್ರಿಗಳದು ಸಂಗ್ರಹ. ಇದಕ್ಕೆ 'ವಚನ ಭಾರತ'ವೆಂದು ಹೆಸರು.

ತೆಲುಗುಭಾಷೆಯ ಸಾಹಿತ್ಯ ಪ್ರಾರಂಭವಾದುದೇ ಭಾರತದ ಭಾಷಾಂತರದಿಂದ. ಈ ಕಾರ್ಯವು ಕ್ರಿ.ಶ. ೧೧ನೆಯ ಶತಮಾನದಿಂದ ೧೪ನೆಯ ಶತಮಾನದವರೆಗೆ ನಡೆಯಿತು. ನನ್ನಯ್ಯನೇ ಇದರ ಪ್ರಥಮ ಪ್ರವರ್ತಕ. ರಾಜ ರಾಜ ನರೇಂದ್ರನ ಕೋರಿಕೆಯ ಮೇಲೆ ನನ್ನಯ್ಯನು ಭಾರತದ ಮೊದಲನೆಯ ಎರಡು ಪರ್ವವನ್ನು ಅರಣ್ಯಪರ್ವದ ಮೊದಲನೆಯ ಭಾಗವನ್ನೂ ಭಾಷಾಂತರಿಸಿದನು. ಮುಂದೆ ೧೩ನೆಯ ಶತಮಾನದಲ್ಲಿ ತಿಕ್ಕನ ಸೋಮಯಾಜಿಯು ವಿರಾಟಪರ್ವದಿಂದ ಮುಂದಿನ ೧೫ ಪರ್ವವನ್ನು ಪೂರ್ಣಮಾದನು. ೧೪ನೆಯ ಶತಮಾನದಲ್ಲಿ ಶಂಭುದಾಸನು ವಿರಾಟಪರ್ವದ ಉಳಿದಭಾಗವನ್ನು ನನ್ನಯ್ಯನ ಹೆಸರಿನಲ್ಲಿಯೇ ರಚಿಸಿ ಕಾರ್ಯವನ್ನು ಪೂರ್ಣಗೊಳಿಸಿದನು. ಈ ಮೂವರೂ ಮಹಾಪ್ರಾಜ್ಞರಾದ ಕವಿಗಳು. ಎಲ್ಲರೂ ಮೂಲಕ್ಕೆ ಲೋಪಬರದಂತೆ ವಿರೋಧವಿಲ್ಲದಂತೆ ಭಾಷಾಂತರಿಸಿದ್ದಾರೆ ೧೫ನೆಯ ಶತಮಾನದಲ್ಲಿ ಪಿಲ್ಲಲಮರ್ರಿ ಪಿನವೀರಭದ್ರನು ಜೈಮಿನಿ ಭಾರತವನ್ನು ತೆಲುಗಿಗೆ ಭಾಷಾಂತರಿಸಿದನು. ಮುಂದೆ ತೆಲುಗಿನಲಿ ಅನೇಕ ಭಾರತ ಸಂಬಂಧವಾದ ಕೃತಿಗಳು ರಚಿತವಾಗಿವೆ. ರಘುನಾಥನಾಯಕನ ಕಾಲದಲ್ಲಿ ಚಮಕೂರಿ ವೆಂಕಟ ಕವಿಯ 'ವಿಜಯವಿಲಾಸಕಾವ್ಯ' ದಲ್ಲಿ ಅರ್ಜುನನ ವಿಜಯ ಯಾತ್ರೆಯ ಕಾಲದಲ್ಲಿ ನಡೆದ ಉಲೂಪಿ, ಚಿತ್ರಾಂಗದೆ ಮತ್ತು ಸುಭದ್ರಾ ವಿವಾಹಗಳು ವರ್ಣಿತವಾಗಿವೆ. ಅನ್ನಮಾಚಾರ್ಯರ ಹಿರಿಯ ಹೆಂಡತಿ ತಿಮ್ಮಕ್ಕ 'ಸುಭದ್ರಾಪರಿಣಯ'ದ ಕರ್ತೃ. ವಿಜಯರಾಘವನಾಯಕನಿಂದ ಕನಕಾಭಿಷಿಕ್ತಳಾದ ಕವಯಿತ್ರಿ ಪಶುಪರ್ತಿ ರಂಗಾಜಮ್ಮ 'ಗದ್ಯಭಾರತ'ವನ್ನು ರಚಿಸಿದ್ದಾಳೆ ವಿಜಯರಂಗ ಚೊಕ್ಕನಾಥನ ಆಶ್ರಯದಲ್ಲಿ ಸಮ್ಮುಖಂ ವೆಂಕಟ ಕೃಷ್ಣಪ್ಪನೆಂಬುವನು ಜೈಮಿನಿಭಾರತವನ್ನು ತೆಲುಗಿನ ಭಾಷಾಂತರಿಸಿದ್ದಾನೆ.ಗೋಲ್ಕೊಂಡದ ರಾಜರ ಆಶ್ರಯದಲ್ಲಿ ವಿಲಕ್ಕುಚ್ಚಿ ಬಾಲಸರಸ್ವತಿ ಎಂಬುವಳು 'ರಾಘವಪಾಂಡವೀಯಂ' ಎಂಬ ದ್ವಿಸಂಧಾನ ಕಾವ್ಯವನ್ನು ರಚಿಸಿದಳು. ೧೯ನೆಯ ಶತಮಾನದ ಪರಿವರ್ತನ ಯುಗದಲ್ಲಿ ಅಕುಂಡಿ ವ್ಯಾಸಮೂರ್ತಿ ಶಾಸ್ತ್ರಿಯು 'ಭಾರತ ನವನೀತಂ' ಎಂಬ ಕಾವ್ಯವನ್ನು ರಚಿಸಿದನು. ೨೦ನೆಯ ಶತಮಾನದಲ್ಲಿ ಶತಾವಧಾನಿ ತಿರುಪತಿಶಾಸ್ತ್ರಿ, ಪರಿಪುಂಡಿ ಅಪ್ಪಾಲಶಾಸ್ತ್ರಿ, ಶ್ರೀಪಾದಕೃಷ್ಣಶಾಸ್ತ್ರಿ ಇವರು ಸಂಸ್ಕೃತ ಭಾರತವನ್ನು ಭಾಷಾಂತರಿಸಿದರು. ಕಮ್ಮಕುಂಡ ತ್ರಿಪುರದೇವಿ ರಾಮಸ್ವಾಮಿ ಚೌಧುರಿಯು ವ್ಯಾಸ ಭಾರತದ ಕಥೆಗೆ ನೇರವಿರೋಧವಾಗಿ ಧಾರ್ತರಾಷ್ಟ್ರರನ್ನೇ ನಾಯಕರನ್ನಾಗಿ ಮಾಡಿ ಕೃತಿರಚನೆ ಮಾಡಿದ್ದಾರೆ. ಇತ್ತೀಚೆಗೆ ಕೇಸರಿ ಸುವರ್ಣ ಪದಕವನ್ನು ಪಡೆದ ಕಲ್ಲೂರಿ ವಿಶಾಲಾಕ್ಷಮ್ಮ ಎಂಬುವಳು 'ಭಾರತಕಥಾಮೃತಂ' ಎಂಬುದನ್ನು ರಚಿಸಿದ್ದಾಳೆ.

ಮಲೆಯಾಳಿ ಭಾಷೆಯಲ್ಲಿ ಸಂಪೂರ್ಣ ಭಾರತ ಕಥೆಗಳು ವಿಶೇಷವಾಗಿಲ್ಲ. ತಿರುವಾಂಕೂರಿನ ನಿರಣಕು ಎಂಬ ಊರಿನ ಕವಿಮನೆತನದವರು ಕನ್ನಸ್ಸ ಪಾಟ್ಟುಹಳ್ ಎಂಬ ಕವನ ಸಂಗ್ರಹವನ್ನು ರಚಿಸಿದ್ದಾರೆ ಈ ವಂಶದ ಶಂಕರ ಪಣಿಕ್ಕರ್ ಎಂಬುವನು 'ಭಾರತಮಾತೆ' ಯೆಂಬ ಗ್ರಂಥವನ್ನು ರಚಿಸಿರುವನೆಂದು ಪ್ರತೀತಿ. ಇವನು ೧೫ನೆಯ ಶತಮಾನದವನು. ಇವನ ಶೈಲಿಯು ಬಹಳ ಸರಳವಾಗಿದೆ. ಮಲೆಯಾಳಿ ಸಾಹಿತ್ಯದಲ್ಲಿ ಚಂಪು ಗ್ರಂಥಗಳಿಗೆ ವಿಶೇಷಸ್ಥಾನ. ಈ ರೀತಿಯಲ್ಲಿ ಕಟ್ಟತ್ತುನಾಟ್ಟು ಕೃಷ್ಣವಾರಿಯರ್ ಮತ್ತು ಚಣಕ್ಕರ ಉನ್ನ ಕೃಷ್ಣವಾರಿಯರ್ ಎಂಬುವರು 'ರಾಯಸೂಯಮ್' ಮತ್ತು 'ಕೀಚಕಮ್'

ಎಂಬ ಎರಡು ಕೃತಿಗಳನ್ನು ರಚಿಸಿದ್ದಾರೆ. ೧೯ ನೆಯ ಶತಮಾನದಲ್ಲಿ ಭಾರತಕ್ಕೆ ಸಂಬಂಧ ಪಟ್ಟಂತೆ ಕಾರ್ತಿಕ ತಿರುನಾಳ್ 'ಸುಭದ್ರಾಹರ ಣಮ್' 'ಗಂಧರ್ವ ವಿಜಯಮ್' 'ಪಾಂಚಾಲೀ ಸ್ವಯಂವರಂ' ಎಂಬ ಆಟ್ಟಕಥೆಗಳನ್ನು ಸ್ವಾತೀ ತಿರುನಾಳ್ 'ಕೀಚಕವಧ್' ಎಂಬ ಆಟ್ಟ ಕಥೆ ಯನ್ನೂ ರಚಿಸಿದ್ದಾರೆ. ಇಕ್ಕ್ಯವು ಅಮ್ಮನಿನ 'ಸುಭ ದ್ರಾರ್ಜುನ, ಮಲೆಯಾಳಿಯಲ್ಲಿ ರಚಿತವಾದ ಮೊದಲನೆಯ ನಾಟಕ ೧೫ ನೆಯ ಶತಮಾನದಲ್ಲಿ ಕುನ್ಹಿ ಕುಡತ್ತನ್ ಅಲ್ಪ ಕಾಲದಲ್ಲಿ ಮಹಾಭಾರತ ವನ್ನು ಮಲೆಯಾಳೀ ಭಾಷೆಗೆ ಭಾಷಾಂತರಿಸಿ ದ್ದಾನೆ.

ಔತ್ತರೇಯ ಭಾಷೆಗಳಲ್ಲಿ ಭಾಗವತಪಂಥ ಗಳು ವಿಶೇಷವಾಗಿ ಪ್ರಚಾರದಲ್ಲಿದ್ದುದರಿಂದ ರಾಮ ಮತ್ತು ಕೃಷ್ಣರ ಚರಿತ್ರೆಗೆ ಅಗ್ರಸ್ಥಾನ ಆದುದರಿಂದ ಅಲ್ಲಿ ರಾಮಾಯಣ ಮತ್ತು ಭಾಗ ವತ ವಿಷಯಕವಾದ ಗ್ರಂಥಗಳು ಯಥೇಷ್ಟವಾಗಿ ರಚಿತವಾಗಿದೆ. ಆದರೆ ದಕ್ಷಿಣ ದೇಶಕ್ಕೆ ಸಮೀಪವರ್ತಿ ಯಾದ ಒರಿಯ ಭಾಷೆಯಲ್ಲಿ ಹಾಗಿಲ್ಲ. ಆ ಭಾಷೆ ಯಲ್ಲಿ ಈಚೆಗೆ ಅನೇಕ ಭಾರತಕ್ಕೆ ಸಂಬಂಧ ಪಟ್ಟ ಕೃತಿಗಳು ರಚಿತವಾಗುತ್ತಿದ್ದರೂ ೧೫ ನೆಯ ಶತ ಮಾನದಲ್ಲಿ ರಚಿತವಾದ ಸರಳ ದಾಸನ ಭಾರತವೇ ವಿಶೇಷ ಜನಪ್ರಿಯವಾಗಿದೆ. ಸರಳದಾಸನು ಕಪಿ ಲೇಂದ್ರ ದೇವನ ಆಶ್ರಯದಲ್ಲಿದ್ದವನು.ವಿದ್ಯಾವಂತ ನಲ್ಲ; ಅಂಬಿಗರವನು. ಸಂಸ್ಕೃತ ಪರಿಚಯವೇ ಅವನಿಗಿರಲಿಲ್ಲ. ಸಾಯಂಕಾಲದ ವೇಳೆಯಲ್ಲಿ ಬ್ರಾಹ್ಮಣರು ನಡೆಸುತ್ತಿದ್ದ ಪುರಾಣ ಶ್ರವಣದಿಂದ ಪ್ರೇರಿತವಾಗಿ ಭಾರತವನ್ನು ರಚಿಸಿದನು.

ಮೂಲ ಪರಿಚಯವಿಲ್ಲದುದರಿಂದ ಸರಳದಾಸ ನಿಂದ ರಚಿತವಾದ ಭಾರತವು ಸ್ವತಂತ್ರಕೃತಿ ಯಾಗಿದೆ. ಇಲ್ಲಿ ವರ್ಣಿತವಾಗಿರುವ ಅನೇಕ ದೃಶ್ಯಗಳು ಓಢ್ರದೇಶದವೇ. ಪರ್ವಗಳ ಕ್ರಮವೂ ಸಂಖ್ಯೆಯೂ ವ್ಯತ್ಯಾಸವಾಗಿವೆ. ಮೂಲದ ಅನೇಕ ಭಾಗಗಳು ಲುಪ್ತವಾಗಿರುವುದಲ್ಲದೆ, ಅನೇಕ ಹೊಸವಿಷಯಗಳೂ ಸೇರಿಸಲ್ಪಟ್ಟಿವೆ. ಮೂಲದಲ್ಲಿ ದೈವಾಂಶಸಂಭೂತರಾದ ನಾಯಕ ನಾಯಕಿ ಯರು ತಮ್ಮ ದೈವಾಂಶಗಳನ್ನು ಕಳೆದುಕೊಂಡು ಸುಖದುಃಖಗಳಿಂದ ಕೂಡಿದ ಸಾಮಾನ್ಯ ಓಢ್ರರೇ ಆಗುತ್ತಾರೆ. ದುರ್ಯೋಧನನು ಅರಣ್ಯದ ಲ್ಲಿದ್ದ ಪಾಂಡವರನ್ನು ಗುರುತಿಸಲು ಕಳುಹಿಸಿದ ಗುಪ್ತಚಾರನ ಹೆಸರು ಅರ್ಜುನ ಫಂಡ. ಪಾಂಡ ವರು ಸ್ವರ್ಗಾರೋಹಣ ಮಾಡುವ ದಾರಿಯಲ್ಲಿ ಅವರನ್ನೂ ಓಢ್ರದೇಶಕ್ಕೆ ಬರಮಾಡಿರುವುದಲ್ಲದೆ ಶಾಪ ವಿಮೋಚನಕ್ಕಾಗಿ ಹರಿಸಾಹು ಎಂಬ ವರ್ತ ಕನ ಮಗಳನ್ನು ಯುಧಿಷ್ಠಿರನು ಮದುವೆಯಾಗು ವಂತೆ ಮಾಡಿದ್ದಾನೆ. ಒಟ್ಟಿನಲ್ಲಿ ಸರಳದಾಸನ ಭಾರತವು ದೇಶಭಕ್ತಿಯುಕ್ತವಾದ ರಾಷ್ಟ್ರೀಯ ಕಾವ್ಯವಾಗಿ ಪರಿಣಮಿಸಿದೆ. ಒರಿಯ ಭಾಷಾಂತ ರಿತಗ್ರಂಥಗಳಲ್ಲಿ ಉತ್ತಮವಾದದು ಫಕೀರ್ ಮೋಹನ್ ಸೇನಾಪತಿ ಮೂಲದಿಂದ ಭಾಷಾಂತ ರಿಸಿದ ಭಾರತ. ಇವನು ವಿವಿಧರೀತಿಯ ಕೃತಿಗ ಳನ್ನು ರಚಿಸಿ ಆಧುನಿಕ ಒರಿಯಾಸಾಹಿತ್ಯದ ನಾಯಕ ವ್ಯಕ್ತಿಯಾಗಿದ್ದಾನೆ. ಇವನ ಗ್ರಂಥಗಳು ಜನಪ್ರಿಯವಾಗಿವೆ ಇಪ್ಪತ್ತನೆಯ ಶತಮಾನದಲ್ಲಿ ಹುಟ್ಟ್ಟಿ ಕವಿಯಾದ ಗಂಗಾಧರ್‌ಮೆಹರ್ 'ಕೀಚಕ ವಧೆ' ಎಂಬ ಕಾವ್ಯವನ್ನು ರಚಿಸಿದ್ದಾನೆ.

ಅಸ್ಸಾಮಿಯಾ ಭಾಷೆಯಲ್ಲಿ ಹದಿಮೂರನೆಯ ಶತಮಾನದಲ್ಲಿಯೇ ಮಹಾಭಾರತ ಸಂಬಂಧಿ ಯಾದ ಕೃತಿ ರಚನೆ ಪ್ರಾರಂಭವಾಯಿತು.ದುರ್ಲಭ ನಾರಾಯಣನ ಮಗನಾದ ಇಂದ್ರನಾರಾಯಣನ ಆಶ್ರಯದಲ್ಲಿ ಹರಿಹರವಿಪ್ರನೆಂಬುವನು ಮಹಾ ಭಾರತದ ಅಶ್ವಮೇಧಕ್ಕೆ ಸೇರಿದ 'ಬಭ್ರುವಾಹನ ಯುದ್ಧ'ವನ್ನು ರಚಿಸಿದನು. ಇದರ ಕಥೆ ಜೈಮಿನಿ ಭಾರತದಲ್ಲಿರುವ ಬಭ್ರುವಾಹನನ ಕಥೆಗೆ ಬಹು ಮಟ್ಟಿಗೆ ಹೊಂದುತ್ತದೆ. ಹರಿಹರನು ತನ್ನ ಗ್ರಂಥವನ್ನು ದುಬಾರಿ, ಚಾಬಿ, ಝುಮಾರಿ ಮತ್ತು ಪದಛಂದಸ್ಸುಗಳಲ್ಲಿ ರಚಿಸಿದ್ದಾನೆ. 'ಬಭ್ರುವಾಹನ

( 27ನೇ ಪುಟ ನೋಡಿ )

# ಶಂಕರಾಚಾರ್ಯರ ಭಕ್ತಿ



ಶರಣ್ಯೋ ಲೋಕೇಶೋ ಮಮ ಭವತು
ಕೃಷ್ಣೋಽಕ್ಷಿ ವಿಷಯಃ ॥

ಅದ್ವೈತಮತ ಪ್ರತಿಷ್ಠಾಪಕರಾದ, ಶ್ರೀ ಶಂಕರ ಭಗವತ್ಪಾದಾಚಾರ್ಯರನ್ನು, ಕೇವಲ 'ಜ್ಞಾನ ಯೋಗ' ಸಂಸ್ಥಾಪಕರು ಎಂದು ಭಾವಿಸುವುದು, ಅವರ ಬಗ್ಗೆ ಮಾಡುವ ಅಪಚಾರವಾದೀತು "ಅದ್ವೈತವಾದ" ಜ್ಞಾನಯೋಗದ ಕೊನೆಯ ಹಂತವೆಂಬುದು ಸತ್ಯವಾದ ಸಂಗತಿಯಾದರೂ, ಆಚಾರ್ಯವರ್ಯರ ಉಪದೇಶ, ಇದೊಂದಕ್ಕೇ ಸೀಮಿತವಾಗಿರದೆ, ಕರ್ಮ, ಭಕ್ತಿಗಳನ್ನು ತನ್ನಲ್ಲಿ ಅಳವಡಿಸಿಕೊಂಡಿದೆ. ಯೋಗತ್ರಯಗಳಲ್ಲಿ ಒಂದಾಗಿ, ಈ ಕಲಿಯುಗಕ್ಕೆ ಸುಲಭಸಾಧ್ಯವಾದ ಭಕ್ತಿಯೋಗದ ಪ್ರಭಾವ ಅವರ ಜೀವನದಲ್ಲಿ ಬಹುಮುಖವಾಗಿ, ಕಾಣಿಸಿಕೊಂಡಿರುವುದರಿಂದ "ಭಕ್ತ ಶಂಕರ" ಎಂಬ ಅಂಕಿತಕ್ಕೆ ಆ ಪೂಜ್ಯರು ಸರ್ವಥಾ ಅರ್ಹರಾಗಿದ್ದಾರೆ

ಶಂಕರ ಬಾಲ್ಯ ಮಾತಾಪಿತೃಗಳ ಭಕ್ತಿಯಿಂದ ಆರಂಭವಾಯಿತು ಎಂಬುದನ್ನು ಅವರ ಜೀವನ ಚರಿತ್ರೆಯಿಂದ ಅರಿಯಬಹುದು. ತಾಯಿಯಾದ 'ಆರ್ಯಾಂಬ'ಯ ಅನುಮತಿಯಿಲ್ಲದೇ, ತಮಗೆ ಪ್ರಿಯವಾದ ಸಂನ್ಯಾಸದೀಕ್ಷೆಯನ್ನು ತೆಗೆದುಕೊಳ್ಳಲೂ ಸಿದ್ಧರಾಗದಿರುವುದು, ಅವರ ಮಾತೃಭಕ್ತಿಯ ದ್ಯೋತಕವಾದಂತೆಯೇ, ಸಂನ್ಯಾಸಿಯಾಗಿದ್ದರೂ, ಆಕೆಯ ಅಂತ್ಯಕ್ರಿಯೆಯಲ್ಲಿ ಭಾಗ ವಹಿಸಿ, ತನ್ನ ಕರ್ತವ್ಯವನ್ನು ನಿರ್ವಹಿಸಿರುವುದೂ, ಆ ಭಕ್ತಿಯ ಸ್ಪಷ್ಟಪ್ರತಿಪಾದಕವಾಗಿದೆ.

'ಪ್ರಶ್ನೋತ್ತರಮಾಲಿಕೆ' ಎಂಬ ಅವರ ಗ್ರಂಥದಲ್ಲಿ, "ಪ್ರತ್ಯಕ್ಷ ದೇವತಾ ಕಾ ? – ಮಾತಾ, ಪೂಜ್ಯೋ ಗುರುಶ್ಚ ಕಃ ? – ತಾತಃ" ಎಂಬ ಪ್ರಶ್ನೋತ್ತರಗಳು, ಜಗತ್ತಿನಲ್ಲಿ ಮಾನವನಿಗೆ, ಮಾತಾಪಿತೃ ಭಕ್ತಿಯನ್ನುಪದೇಶಿಸುವ ಪವಿತ್ರ ವಾಕ್ಯಗಳಾಗಿವೆ.

ತಮ್ಮ ದೀಕ್ಷಾಚಾರ್ಯರಾದ, ಗೋವಿಂದ ಭಗತ್ಪಾದರಲ್ಲಿ ಇವರಿಟ್ಟ ಭಕ್ತಿ ಅಪಾರವಾಗಿತ್ತು. ಪ್ರವಾಹದಿಂದ ಉಕ್ಕಿ, ಗುರುವಿನ ಗುಹಾಪ್ರವೇಶ ಮಾಡುತ್ತಿದ್ದ, ನದಿಯ ಜಲರಾಶಿಯನ್ನು ತಮ್ಮ ತಪಃಶಕ್ತಿಯಿಂದ ತಡೆದು, ತಮ್ಮ ಗುರು ಗೌರವವನ್ನು ಪ್ರದರ್ಶಿಸಿದವರು, ಈ ಭಗವತ್ಪಾದರು. "ವೈರಾಗ್ಯಮಾತ್ಮ ಬೋಧೋ ಭಕ್ತಿಶ್ಚೇತಿ ತ್ರಯಂ ಗದಿತಂ। ಮುಕ್ತೇಃ ಸಾಧನಮಾದೌ" ಎಂದು ಮುಕ್ತಿಗೆ, 'ವೈರಾಗ್ಯ, ಆತ್ಮಜ್ಞಾನ, ಭಕ್ತಿ' ಈ ಮೂರನ್ನು ಕಾರಣಗಳೆಂದು ಸಾಮಾನ್ಯವಾಗಿ ಹೇಳಿದ್ದರೂ "ಮೋಕ್ಷಕಾರಣಸಾಮಗ್ರ್ಯಾಂ ಭಕ್ತಿರೇವ ಗರೀಯಸೀ" ಎಂದಿದ್ದಾರೆ.

ವಿವೇಕ ಚೂಡಾಮಣಿಯಲ್ಲಿ "ಸ್ವಸ್ವರೂಪಾನುಸಂಧಾನಂ ಭಕ್ತಿರಿತ್ಯಭಿಧೀಯತೇ" ಎಂದು ಭಕ್ತಿಯೆಂಬುದು 'ಸ್ವಸ್ವರೂಪಾನುಸಂಧಾನ' ಎಂದು ಅದರ ಲಕ್ಷಣವನ್ನು ಹೇಳಿದ್ದಾರೆ.

"ಅಂಕೋಲಂ ನಿಜಬೀಜಸಂತತಿರ
ಯಸ್ಕಾಂತೋಪಲಂ ಸೂಚಿಕಾ
ಸಾಧ್ವೀನೈಜವಿಭುಂ ಲತಾಕ್ಷಿತಿರುಹಂ
ಸಿಂಧುಃ ಸರಿದ್ವಲ್ಲಭಂ ।
ಪ್ರಾಪ್ನೋತೀಹ ಯಥಾ ತಥಾ ಪಶುಪತೇಃ
ಪಾದಾರವಿಂದದ್ವಯಂ
ಚೇತೋವೃತ್ತಿರುಪೇತ್ಯ ತಿಷ್ಠತಿ ಸದಾ ಸಾ
ಭಕ್ತಿರಿತ್ಯುಚ್ಯತೇ"

ಎಂಬ ಶಿವಾನಂದಲಹರಿಯ ಶ್ಲೋಕ, 'ಭಕ್ತಿ' ಯನ್ನು ವಿಸ್ತಾರವಾಗಿ ವಿಶ್ಲೇಷಿಸಿದೆ. ಅಂಕೋಲದ ಬೀಜಗಳು ಮರವನ್ನೂ, ಸೂಚಿಯು ಅಯಸ್ಕಾಂತಶಿಲೆಯನ್ನು, ಪತಿವ್ರತೆಯು ತನ್ನ ಪತಿಯನ್ನೂ, ಬಳ್ಳಿಯು ಮರವನ್ನೂ, ನದಿಯು ಸಾಗರವನ್ನೂ ಹೇಗೆ ಹೊಂದಿಕೊಳ್ಳುತ್ತವೆಯೋ, ಅಂತೆಯೇ ಮನೋವೃತ್ತಿ ಭಗವಂತನ ಪಾದಾರವಿಂದಗಳಲ್ಲಿ ನೆಲೆಯಾಗಿ ನಿಲ್ಲುವುದು 'ಭಕ್ತಿ'.

ಚಾಂಚಲ್ಯತೆಯ ಪರಿಣಾಮವಾಗಿ, ನಿಗ್ರಹಿಸಲು ಅಸಮರ್ಥವಾದ 'ಮನೋವೇಗ' ವನ್ನು ತಡೆಯಲು ಭಗವದ್ಭಕ್ತಿ ಅತ್ಯಗತ್ಯ ಎಂಬುದನ್ನು "ಹರಿಚರಣ ಭಕ್ತಿಯೋಗಾನ್ಮನಃ ಸ್ವವೇಗಂ ಜಹಾಂತಿ ಶನೈಃ"ಎಂಬ ವಾಕ್ಯದಿಂದ ಹೇಳಲಾಗಿದೆ.

ಭಗವದ್ಭಕ್ತಿಯ ಫಲವು ಯಾವುದು ? ಎಂದು ಪ್ರಶ್ನಿಸುತ್ತ, "ತಲ್ಲೋಕ ಸ್ವರೂಪ ಸಾಕ್ಷಾತ್ತ್ವಂ" ಎಂದು ಶ್ರೀ ಶಂಕರರು ಉತ್ತರಿಸಿದ್ದಾರೆ. ಭಗವದ್ಭಕ್ತಿಯಿಂದ ಸಾಲೋಕ್ಯ, ಸಾಮೀಪ್ಯ, ಮತ್ತು ಸಾಯುಜ್ಯ ಪ್ರಾಪ್ತಿಯಾಗುತ್ತದೆ.

"ವಿನಾಯಸ್ಯ ಧ್ಯಾನಂ ವ್ರಜತಿ ಪಶುತಾಂ
ಸೂಕರಮುಖತಾಂ
ವಿನಾಯಸ್ಯ ಜ್ಞಾನಂ ಜನಿಮೃತಿಭಯಂ
ಯಾತಿ ಜನತಾ।
ವಿನಾಯಸ್ಯ ಸ್ಮೃತ್ಯಾ ಕ್ರಿಮಿಶತಜನಿಂ
ಯಾತಿ ಸ ವಿಭುಃ

ಯಾವ ಶ್ರೀಕೃಷ್ಣನ ಧ್ಯಾನವಿಲ್ಲದೇ, ಹಂದಿಯೇ ಮೊದಲಾದ ಪಶುವಿನ ಜನ್ಮವನ್ನು ಪಡೆಯಲಾಗುವುದೋ, ಯಾವಾತನ ಸ್ಮರಣೆಯಿಲ್ಲದೇ, ಕ್ರಿಮಿಗಳ ಜನ್ಮವನ್ನು ಹೊಂದಲಾಗುವುದೋ, ಅಂತಹು ಶರಣನೂ, ಲೋಕೇಶನೂ ಆದ ಶ್ರೀಕೃಷ್ಣನು ದೃಗ್ಗೋಚರನಾಗಲಿ ಎಂದು ಭಕ್ತಿಯಿಂದ ಬೇಡಿಕೊಂಡ, ಶ್ರೀ ಶಂಕರರು, ಕೇವಲ ಕೃಷ್ಣೋಪಾಸಕರು ಎಂದು ಹೇಳುವುದು ತಪ್ಪಾದೀತು. ಷಣ್ಮತಸ್ಥಾಪನಾಚಾರ್ಯರೆಂದು, ಪ್ರಸಿದ್ಧರಾದ ಅವರ ಭಕ್ತಿ ಬೇರೆ ಬೇರೆ ದೇವತೆಯನ್ನು ಕುರಿತು ಅವರು ರಚಿಸಿದ ಸ್ತೋತ್ರಗಳಲ್ಲಿ ಕಾಣಬಹುದು.

"ನತೇತರಾತಿಭೀಕರಂ, ನವೋದಿತಾರ್ಕ
ಭಾಸ್ವರಂ।
ನಮತ್ಸುರಾರಿ ನಿರ್ಜರಂ ನತಾಧಿಕಾಪ
ದುದ್ಧರಮ್"

ಎಂದು ಗಣೇಶ ಪಂಚರತ್ನ ಸ್ತೋತ್ರದಲ್ಲಿ ಸ್ತುತಿಸಿದಂತೆಯೇ, ಸುಬ್ರಹ್ಮಣ್ಯಭುಜಂಗ ಸ್ತೋತ್ರದಲ್ಲಿ "ಪುಲಿಂದಾತ್ಮಜಾಕಾಂತ ಭಕ್ತಾರ್ತಿಹಾರಿನ್, ಪ್ರಭೋ ತಾರಕಾರೇ ಸದಾ ರಕ್ಷಮಾಂ ತ್ವಂ" ಎಂದು ಪ್ರಾರ್ಥಿಸಿದ್ದಾರೆ.

ಶಿವಾನಂದಲಹರೀ, ಶಿವಭುಜಂಗ, ಪಾದಾದಿ ಕೇಶಾಂತ ವರ್ಣನ ಸ್ತೋತ್ರಂಗಳು, ಆಚಾರ್ಯರ ಶಿವಭಕ್ತಿಪ್ರಕಾಶಕಗಳು, ಸೌಂದರ್ಯಲಹರೀ, ವೇದಪಾದಸ್ತೋತ್ರ, ತ್ರಿಪುರಸುಂದರೀ ಮಾನಸ ಪೂಜಾಸ್ತೋತ್ರಾದಿಗಳು ದೇವೀಭಕ್ತಿಪ್ರಕಾಶಕಗಳು. ಹರಿಸ್ತುತಿ, ಲಕ್ಷ್ಮೀನೃಸಿಂಹಸ್ತೋತ್ರ

ವಿದ್ವಾನ್ ಬಿ. ಬಾಲಗಣಪತಿ ಭಟ್ಟ

ವಿಷ್ಣುಪಾದಾದಿ ಕೇಶಾಂತ ಸ್ತೋತ್ರಾದಿಗಳು ವಿಷ್ಣುಭಕ್ತಿಪ್ರಕಾಶಕಗಳು.

"ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ
ಪಾದಸೇವನಂ ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮ
ನಿವೇದನಂ"

ಎಂಬಂತೆ, ಶ್ರವಣಾದಿ ನವವಿಧವಾದ ಭಕ್ತಿಯ ಪರಿಚಯವನ್ನು, ಶ್ರೀ ಶಂಕರ ಭಗವತ್ಪಾದಾಚಾರ್ಯರು, ತಮ್ಮ ಸ್ತೋತ್ರಶ್ರೇಣಿಯಲ್ಲಿ ಸೇರಿಸಿದ್ದಾರೆಂಬುದನ್ನು, ಆ ಸ್ತೋತ್ರಗಳ ಪಾಠಕರು ಅರಿಯಬಹುದು. ಅಂತೆಯೇ "ಚತುರ್ವಿಧಂ ಭಜಂತೇ ಮಾಂ ಜನಾಃ ಸುಕೃತಿನೋಽರ್ಜುನ । ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ" ಎಂಬ ವಾಕ್ಯದಲ್ಲಿ ಹೇಳಿದ, ಚತುರ್ವಿಧ ಭಕ್ತರ ಕಳಕಳಿಯ ಪ್ರಾರ್ಥನೆಯೂ, ಶ್ರೀಮದಾಚಾರ್ಯರ ಸ್ತೋತ್ರಗಳಲ್ಲಿ ಪ್ರಕಟವಾಗಿವೆ.

'ಭಕ್ತಿ' ಎಂಬ ಪದ 'ಭಜ್ ಸೇವಾಯಾಂ' ಎಂಬ ಧಾತುವಿನಿಂದ ಜನಿಸಿದೆ. "ಭಜಗೋವಿಂದಂ ಭಜಗೋವಿಂದಂ ಗೋವಿಂದಂ ಭಜ ಮೂಢಮತೇ ಸಂಪ್ರಾಪ್ತೇ ಸನ್ನಿಹಿತೇಕಾಲೇ ..." ಎಂಬ ಶ್ರೀಶಂಕರರ ನಿರ್ದೇಶ, ಸಾರ್ವಕಾಲಿಕ, ಹಾಗೂ ಸಾರ್ವದೇಶಿಕವಾಗಿ, ಮಾನವಜೀವನದಲ್ಲಿ 'ಭಕ್ತಿ'ಯ ಪ್ರಥಮೋಪಾಸನೆಯನ್ನು ಘೋಷಿಸಿದೆ.

ಭಗವದ್ಭಕ್ತಿಯನ್ನು ಆಶ್ರಯಿಸಿದ ವ್ಯಕ್ತಿಯು, ತನ್ನ ಅವಯವಗಳೆಲ್ಲವನ್ನೂ ಒಂದಲ್ಲ ಒಂದು ರೀತಿಯಲ್ಲಿ, ಭಗವಂತನ ಸೇವೆಗಾಗಿ ಮುಡುಪಾಗಿಟ್ಟಿರುತ್ತಾನೆ.

"ಮನಸ್ತೇ ಪಾದಾಬ್ಜೇ ನಿವಸತು ವಚಃ
ಸ್ತೋತ್ರಫಣಿತೌ
ಕರೌ ಚಾಭ್ಯರ್ಚಾಯಾಂ ಶ್ರುತಿರಪಿ
ಕಥಾಕರ್ಣನ ವಿಧೌ ।
ತವಧ್ಯಾನೇ ಬುದ್ಧಿರ್ನಯನಯುಗಳಂ
ಮೂರ್ತಿವಿಭವೇ

ಮನಸ್ಸು ಭಗವಂತನ ಪಾದಕಮಲದಲ್ಲಿ ನೆಲಸಲಿ, ವಾಕ್ಕು ಸ್ತೋತ್ರ ಪಾಠದಲ್ಲಿ ನಿರತವಾಗಲಿ, ಕೈಗಳು ಅರ್ಚಿಸಲಿ, ಕಿವಿಗಳ ಕಥೆಯನ್ನು ಕೇಳಲಿ, ಬುದ್ಧಿಯು ಭಗವತ್‌ಧ್ಯಾನದಲ್ಲಿ ನಿಲ್ಲಲಿ. ಕಣ್ಣುಗಳು ವಿಗ್ರಹ ವೈಭವವನ್ನು ಕಾಣಲಿ" ಎಂಬ ಭಾವನೆಯನ್ನು ಭಕ್ತೋತ್ತಮ ಬೆಳೆಸಿರುತ್ತಾನೆ. ಭಕ್ತನ ಬಯಕೆ ಭಗವಂತನ ಸಾಕ್ಷಾತ್ಕಾರ ಎಂಬುದನ್ನು "ವೀಕ್ಷಾಂ ಮೇ ದಿಶ ಚಾಕ್ಷುಷೀಂ ಸಕರುಣಾಂ ದಿವ್ಯೈಶ್ಚಿರಂ ಪ್ರಾರ್ಥಿತಾಂ" ಎಂಬ ವಾಕ್ಯದಿಂದ ಆಚಾರ್ಯರು ವಿವರಿಸಿದ್ದಾರೆ.

ಭಕ್ತನು, ನಿತ್ಯದಲ್ಲಿ ಎಸಗುವ ಕ್ರಿಯೆಗಳೆಲ್ಲವೂ ಒಂದಲ್ಲ ಒಂದು ರೀತಿಯಿಂದ ಭಗವದುಪಾಸನೆಯಾಗಬೇಕೆಂಬ ನಂಬುಗೆಯನ್ನು "ಜಪೋ ಜಲ್ಪಃ ಶಿಲ್ಪಂ ಸಕಲಮಪಿ ಮುದ್ರಾವಿರಚನಾ ಗತಿಃ ಪ್ರಾದಕ್ಷಿಣ್ಯಕ್ರಮಣಮಶನಾದ್ಯಾಹುತಿ ವಿಧಿಃ ಪ್ರಣಾಮಃ ಸಂವೇಶಃ ಸುಖಮಖಿಲಮಾತ್ಮಾರ್ಪಣಧಿಯಾ ಸಪರ್ಯಾಪರ್ಯಾಯಸ್ತವ ಭವತು ಯನ್ಮೇ ವಿಲಸಿತಂ" ಎಂಬ ಸೌಂದರ್ಯಲಹರಿಯ ಶ್ಲೋಕವೊಂದರಲ್ಲಿ ತಿಳಿಸಿದ್ದಾರೆ.

ಆತ್ಮಾರ್ಪಣಬುದ್ಧಿಯಿಂದ, ನನ್ನ ವ್ಯವಹಾರ ನಡೆಯಲಿ. ಮಾತು, ಮಂತ್ರವಾಗಲಿ, ಅಂಗ ವಿನ್ಯಾಸವು ಮುದ್ರಾಪ್ರದರ್ಶನವಾಗಲಿ, ಗಮನವು ಪ್ರದಕ್ಷಿಣಕ್ರಿಯೆಯಾಗಲಿ, ಭೋಜನವು ಆಹುತಿಯಾಗಲಿ, ಮಲಗಿ ಹೊರಳಾಡುವುದು ಸಾಷ್ಟಾಂಗ ಪ್ರಣಾಮವಾಗಲಿ, ಒಟ್ಟಿನಲ್ಲಿ ನನ್ನ ಸಕಲೇಂದ್ರಿಯ ವ್ಯಾಪಾರಗಳೂ, ನಿನ್ನ ಷೋಡಶೋಪಚಾರವಾಗಲಿ.

"ಭಕ್ತೋತ್ತಮನಾದವನು, ಭಗವಂತನನ್ನು ಮತ್ತೆ ಮತ್ತೆ ಬೇಡುವುದೂ ಆ ಭಕ್ತಿಯನ್ನೇ, ಇದರ ಮುಂದೆ ಆತನಿಗೆ, ಐಹಿಕಾಮುಷ್ಮಿಕಸುಖಗಳೆಲ್ಲವೂ ತುಚ್ಛವೇ." ಈ ಭಾವನೆಯನ್ನು ಅಲಂಕಾರಿಕವಾಗಿ ತೋರಗೊಟ್ಟ ಪ್ರಾರ್ಥನೆಯಿದು.

ಅಶನಂ ಗರಳಂ ಫಣೀ ಕಲಾಪೋ
ವಸನಂ ಚರ್ಮ ಚ ವಾಹನಂ ಮಹೋಕ್ಷಃ
ಮಮದಾಸ್ಯಸಿ ಕಿಂ ಕಿಮಸ್ತಿ ಶಂಭೋ
ತವ ಪಾದಾಂಬುಜ ಭಕ್ತಿಮೇವ ದೇಹಿ ॥

ಇದು ಪರಶಿವನ ಪ್ರಾರ್ಥನೆ "ಶಂಭುವೇ! ವಿಷವೇ ನಿನ್ನ ಆಹಾರ, ಸರ್ಪವೇ ಒಡವೆ, ಚರ್ಮವೇ ಬಟ್ಟೆ, ಎತ್ತೇ ವಾಹನ. ಹೀಗಿರುವಾಗ, ನಾನು ನಿನ್ನನ್ನು, ನನಗೆ ಅಗತ್ಯವಾದ ಆಹಾರಾದಿ ಸುಖ ಭೋಗಗಳನ್ನು ಪ್ರಾರ್ಥಿಸಿಕೊಳ್ಳುವಂತಿಲ್ಲ. ಆದುದರಿಂದ ನಿನ್ನ ಪಾದಕಮಲದ ಭಕ್ತಿಯನ್ನೇ ಕರುಣಿಸು"

ಹೀಗೆ, ಶ್ರೀ ಶಂಕರಭಗವತ್ಪಾದರು, ತಮ್ಮ ಸ್ತೋತ್ರ ರಚನೆಗಳಲ್ಲಿ, ಭಕ್ತಿಯ ವೈಶಿಷ್ಟ್ಯವನ್ನು ಬಹುವಾಗಿ ಬಣ್ಣಿಸಿ, ಕಲಿಯುಗದ ದುಷ್ಕರ್ಮಿಗಳಾದ ನಮಗೆ, ಭಗವತ್ಸಾಕ್ಷಾತ್ಕಾರಕ್ಕೆ ಸುಲಭವಾದ ಮಾರ್ಗವನ್ನು ತೋರಿದ್ದಾರೆ.

### ವ್ರತ ವಿಶೇಷ

# ನಾಗ ಪಂಚಮಿ

**ಶ್ರೀನಿವಾಸ ಮಠದ** ಬಿ.ಎಸ್‌.ಸಿ.

"ನಾಗರ ಪಂಚಮಿ ನಾಡಿಗೆ ದೊಡ್ಡದು" ಎಂಬಂತೆ–ನಾಗಪಂಚಮಿ–ಹಬ್ಬವು ಅನೇಕ–ಹಿಂದುಗಳಿಂದ ಶ್ರಾವಣಮಾಸದ ಶುಕ್ಲ–ಪಕ್ಷ ಪಂಚಮೀ ದಿನದಂದು ಆಚರಿಸಲ್ಪಡುತ್ತದೆ. ನಮ್ಮ ಭಾರತದೇಶದಲ್ಲಿ ನಾಗಪೂಜೆ ಆರ್ಷೇಯವಾಗಿ ಬಂದಿದೆ. ಪುರಾಣ ಕಾವ್ಯ, ಮಹಾಕಾವ್ಯ ಮತ್ತು ಜನಪದಗಳಲ್ಲಿ ನಾಗಪೂಜೆಗೆ ಸಂಬಂಧಿಸಿದ ಹಲವಾರು ಉಲ್ಲೇಖಗಳಿವೆ.

ತೈತ್ತರೀಯ ಸಂಹಿತೆಯಲ್ಲಿ ನಾಗಪೂಜೆಗೆ ಸಂಬಂಧಿಸಿದ ಶ್ಲೋಕಗಳಿವೆ. ಹರಪ್ಪ ಸಂಸ್ಕೃತಿಯಲ್ಲಿಯೂ ನಾಗಗಳ ಉಲ್ಲೇಖವಿದೆ. ಜೈನ, ಬೌದ್ಧ, ಶೈವ, ವೈಷ್ಣವ, ಸೌರ, ಗಣಪತ್ಯ, ಶಾಕ್ತ ಇತ್ಯಾದಿ ಮತಗಳಲ್ಲಿ ನಾಗಪೂಜೆಗೆ ಪ್ರಾಧಾನ್ಯವಿದೆ

ನಾಗನು ಶ್ರೀ ವಿಷ್ಣುವಿಗೆ ಹಾಸಿಗೆ, ಶಿವನಿಗೆ ಕಂಠಾಭರಣ, ಗಣಪತಿಯ ಹೊಟ್ಟೆ ಕಟ್ಟು, ಆಗಿರುವುದಲ್ಲದೆ ಭೂಭಾರವನ್ನೇ ಹೊತ್ತಿರುವ ಅಸಾಧಾರಣ ಶಕ್ತಿಶಾಲಿಯಾದ ಆದಿಶೇಷನೆನಿಸಿದ್ದಾನೆ. ಸರ್ಪವು ಸಾಮಾನ್ಯವಾಗಿ ವಿಷ ಜಂತುವಾಗಿದ್ದರೂ ದೈವ ಸನ್ನಿಧಿಯಲ್ಲಿ ಅಮೃತಪ್ರಾಯವಾಗಿದೆ.

ಭಾರತದ ಇತಿಹಾಸದಲ್ಲಿ ಹಿಂದಿನಿಂದಲೂ ಅನೇಕ – ನಾಗವಂಶಗಳಿದ್ದವೆಂದು ತಿಳಿದು ಬರುತ್ತದೆ. ಇತ್ತೀಚೆಗೆ ನಾಗಾ ಜನಾಂಗದ ಒಂದು ಪ್ರತ್ಯೇಕ ಪ್ರಾಂತವೇ ಏರ್ಪಟ್ಟಿದೆ. ನಾಗ ವಂಶೀಯರು ಕೇರಳ ಆಸ್ಸಾಂ ನಾಗಾ ಪ್ರಾಂತಗಳಲ್ಲಿದ್ದಾರೆ. ಜೀಮೂತವಾಹನನ ವಂಶದ ಶಿಲಾಹಾರರು ಮತ್ತು ಚೋಟುವಂಶದವರು ನಾಗರಿಗೆ ಸಂಬಂಧಪಟ್ಟವರು.

ಜನಮೇಜಯ ಮಹಾರಾಜನು ತಾನು ಮಾಡುತ್ತಿದ್ದ ಸರ್ಪಯಜ್ಞವನ್ನು ನಿಲ್ಲಿಸಿ ಮಹಾಭಾರತವನ್ನು ಕೇಳಲು ಪ್ರಾರಂಭಿಸಿದುದು ಶ್ರಾವಣ ಶುದ್ಧ ಪಂಚಮಿದಿನವೇ.

ನಾಗ ಗರುಡರ ಮತ್ಸರ ಶಾಪನಿವಾರಣೆ ಕ್ಷೀರಸ್ನಾನ ಮೊದಲಾದ ಸಂಗತಿಗಳನ್ನೊಳಗೊಂಡ ಕದ್ರು ವಿನತೆಯರ ಕಥೆ ಪುರಾಣಗಳಲ್ಲಿ ಪ್ರಸಿದ್ಧವಾಗಿದೆ

ಹಿಂದೆ ಕಶ್ಯಪನು ಅದಿತಿ ಮತ್ತು ದಕ್ಷಬ್ರಹ್ಮನ ಮಕ್ಕಳಾದ ವಿನತೆ, ಕದ್ರು ಮೊದಲಾದ ಹನ್ನೆರಡು ಜನ ಪುತ್ರಿಯರನ್ನು ಮದುವೆಯಾಗಿದ್ದನು. ಅದಿತಿಗೆ 12 ಜನ ಆದಿತ್ಯರು ಜನಿಸಿದರು. ಕದ್ರುವು ಗರ್ಭವತಿಯಾಗಿದ್ದಾಗ ವಿನತೆಯು ಸವತಿ ಮಾತ್ಸರ್ಯದಿಂದ ಗರ್ಭವತಿಯಾದ ತಾನು ಪಕ್ವವಾಗುವುದಕ್ಕಿಂತ ಮೊದಲೇ ಆತುರದಲ್ಲಿ ಪ್ರಸವಿಸಿದಳು. ಆದ್ದರಿಂದ ಹೆಳವನಾದ ಅರುಣನು ಹುಟ್ಟಿದನು. ಆಮೇಲೆ ಗರುಡನು ಹುಟ್ಟಿದನು. ಈ ಗರುಡನು ತನ್ನ ಮಲತಾಯಿಯಾದ ಕದ್ರುವಿನ ಮಕ್ಕಳಾದ ನಾಗರಿಗೆ ಶತ್ರುವಾದನು. ಕದ್ರುವಿಗೆ ಅನಂತ, ತಕ್ಷಕ, ವಾಸುಕಿ - ಮೊದಲಾದ ಸಾವಿರಾರು ಮಹಾನಾಗರು ಜನಿಸಿದರು. ಕದ್ರು ವಿನತೆಯರ ಸವತಿ ಮಾತ್ಸರ್ಯವು ಮುಂದೆ ಮಕ್ಕಳಲ್ಲಿಯೂ ಆಜನ್ಮ ವೈರವಾಗಿ ಪರಿಣಮಿಸಿತು. ಆದರೂ ನಾಗರು ಕಶ್ಯಪನ ಉಪದೇಶದಿಂದ ತಪಸ್ಸನ್ನಾಚರಿಸಿ ಲಿಂಗಾಕಾರದ ರತ್ನವನ್ನು ಧರಿಸಿ ಪಾಶುಪತವ್ರತದಿಂದ ಪಾತಾಳವನ್ನು ಸೇರಿದರು. ಅವರಲ್ಲಿ ಅನಂತನು ಶಿವಾಜ್ಞೆಯಿಂದ ವಿಷ್ಣುವಿಗೆ ಹಾಸಿಗೆಯಾದನು ಮತ್ತು ತನ್ನ ಯೋಗಬಲದಿಂದ ಪಾತಾಳದಲ್ಲಿದ್ದರೂ ಭೂಮಿಯನ್ನು ಹೊತ್ತನು. ತಕ್ಷಕನು ಇಂದ್ರನಿಗೆ ಮಿತ್ರನಾಗಿ ಆಸ್ತೀಕ ಮಹರ್ಷಿಯ ಸಹಾಯದಿಂದ ಜನಮೇಜಯನು ನಡೆಸುತ್ತಿದ್ದ ಸರ್ಪಯಾಗದಲ್ಲಿ ನಾಗಕುಲವನ್ನು ರಕ್ಷಿಸಿದನು. ವಾಸುಕಿ ಮೊದಲಾದವರು ಗರುಡನ ಹಾವಳಿಯಿಂದಾಗಿ ಶಿವನ ಮೊರೆಹೊಕ್ಕರು. ಲೋಕಗಳನ್ನು ಉದ್ವೇಗಗೊಳಿಸುವ ನಾಗರನ್ನು ಶಿವನು ತನ್ನ ಕಂಠಾಭರಣವನ್ನಾಗಿ ಮಾಡಿಕೊಂಡನು. ಈ ವಾಸುಕಿಯೇ ತ್ರಿಪುರ ಸಂಹಾರ ಕಾಲದಲ್ಲಿ ಮೇರುವೆಂಬ ಬಿಲ್ಲಿಗೆ ಹೆದೆಯಾದನು, ಸಮುದ್ರ ಮಥನ ಕಾಲದಲ್ಲಿ ಮಂದರ ಪರ್ವತವೆಂಬ ಕಡಗೋಲಿಗೆ ಹಗ್ಗವಾಗಿದ್ದನು. ಹೀಗೆ ಅನಂತ, ತಕ್ಷಕ. ವಾಸುಕಿಯರು ಪ್ರಸಿದ್ಧರಾಗಿದ್ದಾರೆ.

ಶ್ರಾವಣ ಶುದ್ಧ ಪಂಚಮಿಯ ದಿನ ಗೋಮಯದಿಂದ ಮನೆ ಬಾಗಿಲುಗಳನ್ನು ಸಾರಿಸಿ, ನಾಗರ ಚಿತ್ರಗಳನ್ನು ಬರೆದು ನಿಯಮದಿಂದ ಪೂಜಿಸಬೇಕು. ಹಾಗೆಯೇ ಭಾದ್ರಪದ, ಆಶ್ವೀಜ ಶುದ್ಧ ಪಂಚಮೀ ದಿನಗಳಲ್ಲಿ ನಾಗರನ್ನು ಪೂಜಿಸಿದರೆ ಸರ್ಪದೋಷ ನಿವಾರಣೆಯಾಗುತ್ತದ.

ಶ್ವೇತಾಂಬರದ ಜೈನರು ಶ್ರಾವಣ ಶುದ್ಧ ಪಂಚಮಿಯಲ್ಲಿ 'ನಾಗಪಂಚಮೀ ವ್ರತ'ವನ್ನೂ, ಮಾರ್ಗಶೀರ್ಷ ಶುದ್ಧ ಪಂಚಮಿಯಲ್ಲಿ 'ನಾಗದೀಪಾವಳಿ'ಯನ್ನೂ ಆಚರಿಸುತ್ತಾರೆ.

ನಾಗಕುಲದೊಡೆಯ ಶೇಷನ ಅಂತರ್ಯಾಮಿಯಾದ ಸಚ್ಚಿದಾನಂದ ಸ್ವರೂಪವುಳ್ಳ ಪದ್ಮನಾಭನನ್ನು ಪೂಜಿಸಿ ಅಭೀಷ್ಟಗಳನ್ನು ಪಡೆಯುವುದೇ 'ನಾಗ ಪಂಚಮಿ'ಯ ಮುಖ್ಯೋದ್ದೇಶವಾಗಿದ.

ನಾರದ ಮಹಾಪುರಾಣದಲ್ಲಿ 'ನಾಗಪಂಚಮೀ' ದಿನದಂದು ಆಚರಿಸಬೇಕಾದ ಪೂಜಾ ವಿಧಾನವನ್ನು ತಿಳಿಸಿಕೊಟ್ಟಿದ್ದಾರೆ. ಅದು ಹೀಗಿದೆ–

ಆ ದಿನದಲ್ಲಿ ಮನೆಯ ಹೆಬ್ಬಾಗಿಲಿನ ಎರಡೂ ಪಾರ್ಶ್ವಗಳಲ್ಲಿ ಸೆಗಣಿಯಿಂದ (ಗೋಮಯದಿಂದ) ಸಾರಿಸಿ ಸರ್ಪಾಕೃತಿಗಳನ್ನು ಬರೆದು ನಿರ್ಮಿಸಿ ಗಂಧಪುಷ್ಪಾದಿಗಳಿಂದ ನಾಗಪೂಜೆಯನ್ನು ಮಾಡಬೇಕು.

(24 ನೇ ಪುಟ ನೋಡಿ)

# ಮಂಡೋದರಿಯ ಪಾತ್ರ

ಡಾ॥ ಎನ್. ವಿ. ವಿಮಲ

ಭರತಖಂಡದ ಆದಿಕಾವ್ಯವಾದ ವಾಲ್ಮೀಕಿ ರಾಮಾಯಣವು ರಚಿತವಾದಂದಿನಿಂದ ಇಂದಿನ ವರೆಗೆ ಸಹಸ್ರಾರು ವರ್ಷಗಳಲ್ಲಿ ಅದು ಬಹುಮುಖವಾಗಿ ವಿವಿಧ ಶಾಖೋಪಶಾಖೆಗಳಾಗಿ ಬೆಳೆದು ದೊಡ್ಡ ಪರಂಪರೆಯನ್ನುಂಟು ಮಾಡಿರುವ ಸಂಗತಿ ಅನೇಕರಿಗೆ ತಿಳಿದಿದೆ. ಇಂದು ಪ್ರಚಲಿತವಿರುವ ರಾಮಾಯಣದ ಕಥೆಯನ್ನಾಧರಿಸಿ ರಚಿತವಾದ ಅನೇಕ ಬಗೆಯ ಕಾವ್ಯ ಖಂಡ – ಕಾವ್ಯ ಹಾಗೂ ನಾಟಕಗಳಿಗೆ ವಾಲ್ಮೀಕಿ ರಾಮಾಯಣವೇ ಮೂಲ ಆಕರ ಮತ್ತು ಸ್ಫೂರ್ತಿಯ ನೆಲೆ ಎನ್ನಬಹುದು.

ವಾಲ್ಮೀಕಿ ರಾಮಾಯಣಕ್ಕೆ ಸಂಬಂಧಪಟ್ಟಂತೆ ಅಲ್ಲಿ ಚಿತ್ರಿತವಾಗಿರುವ ಮಂಡೋದರಿ ಪಾತ್ರದ ನೈಸರ್ಗಿಕ ಸ್ವಭಾವಕ್ಕೆ ಸಹಜವಾಗಿರುವ ಕೆಲವು ಅಂಶಗಳನ್ನು ಈ ಲೇಖನದಲ್ಲಿ ಪ್ರಸ್ತಾಪಿಸುತ್ತೇನೆ.

ಮಂಡೋದರಿ ರಾಕ್ಷಸರ ಶಿಲ್ಪಿ ಮಯಾಸುರ ಮತ್ತು ಹೇಮೆಯೆಂಬ ಅಪ್ಸರೆಯರ ಮಗಳು. ರಾವಣಾಸುರನ ಪತ್ನಿ, ಅವನ ಮುಖ್ಯರಾಣಿ. ರಾಕ್ಷಸ ಕುಲದಲ್ಲಿ ಹುಟ್ಟಿಬೆಳೆದರೂ ರಾಕ್ಷಸ ಸ್ವಭಾವ ಅವಳಲ್ಲಿರಲಿಲ್ಲ. ಸೀತೆಯ ಬಗ್ಗೆ ಅವಳಿಗೆ ಮತ್ಸರವಿರಲಿಲ್ಲ. ರೂಪ, ಗುಣ, ಸಂಸ್ಕೃತಿ, ಮನೋವೈಶಾಲ್ಯದಲ್ಲಿ ಮಂಡೋದರಿ ಸೀತೆಗೆ ಸರಿಸಮಳಾಗಿ ಚಿತ್ರಿತಳಾಗಿದ್ದಾಳೆ.

‘ಮಂಡೋದರಿ’ ಪದದ ಉಗಮ, ಮೂಲಾರ್ಥ, ವಿಶೇಷಾರ್ಥವನ್ನು ನೋಡಬಹುದು.

ಮಂದಂ+ಉದರಂ ಯಸ್ಯಾಃ ಸೌ ಯಾವಳು ಮಂದವಾದ ಉದರಉಳ್ಳವಳೋ ಅವಳು ಮನ್ದೋದರಿ. ಮಂದೋದರಿ ಮಂದಂ=ಚಲಿಸದಿರುವ (ನಿಶ್ಚಲ) ಉದರಂ=ಪಾತ್ರೆ ನಿಶ್ಚಲವಾದ ಪಾತ್ರೆ (Unmoving Container) ಅಂದರೆ ಪ್ರಕೃತಿಯಲ್ಲಿ ಚಲಿಸದಿರುವ ಪಾತ್ರೆ ಎಂದರೆ ಆಕಾಶ. ಹೀಗೆ ‘ಮಂಡೋದರಿ’ ಎಂಬ ಪದವು ಆಕಾಶವನ್ನು ಸೂಚಿಸುತ್ತದೆ. ಮತ್ತು ಮನ್ದೋದರಿ ಪಾತ್ರವು ಆಕಾಶವನ್ನು ಸಂಕೇತಿಸುತ್ತದೆ. ಕನ್ನಡದಲ್ಲಿ ‘ಮಂಡೋದರಿ’ ಪದವು ಮಂಡಂ=ಭೂಷಣ; ಉದರ=ಪಾತ್ರೆ ಎಂದಾಗುತ್ತದೆ. ಮನ್ದೋದರಿ ತದ್ಭವ ಮಂಡೋದರಿ ಅಂದರೆ ತನ್ನ ಪತಿಯಾದ ರಾವಣನಿಗೆ ಇವಳು ಭೂಷಣಪ್ರಾಯಳು. ಇದು ಮನ್ದೋದರಿ ಪಾತ್ರದ ನೈಸರ್ಗಿಕ ಸ್ವಭಾವ (Phenominal Characteristic)

ಋಗ್ವೇದದ ದ್ರಷ್ಟಾರರು ತಾವು ಕಂಡ ಪ್ರಕೃತಿಯ ವೈಚಿತ್ರವನ್ನು ಮತ್ತು ತಮಗಾದ ಪ್ರಕೃತಿಯ ಗೋಚರಾನುಭವನನ್ನು ಋಗ್ವೇದದ ಮಂತ್ರಗಳಲ್ಲಿ, ಆಖ್ಯಾನ, ಉಪಾಖ್ಯಾನಗಳಲ್ಲಿ ಸಂಕೇತ, ಪ್ರತಿಮೆಗಳಾಗಿ ಬಳಸಿದ್ದಾರೆಂದು ವಿದ್ವಾಂಸರು ಗುರುತಿಸಿದ್ದಾರೆ ಉದಾ ಅಗ್ನಿ, ಇಂದ್ರ, ವರುಣ, ಸೂರ್ಯ, ವಿಷ್ಣು–ಇವರೆಲ್ಲ ಪ್ರಕೃತಿಯ ಬೇರೆ ಬೇರೆ ಸ್ವರೂಪಗಳು. ಉತ್ತರ ಧ್ರುವದಲ್ಲಿ ನೆಲೆಸಿದ್ದ ಆರ್ಯರ ಪೂರ್ವಜರು ಆ ಪ್ರದೇಶದಲ್ಲಿ ತಾವು ಕಂಡ ಪ್ರಕೃತಿಯ ವೈಚಿತ್ರ್ಯಗಳನ್ನು (10 ತಿಂಗಳು ಹಗಲು, 2 ತಿಂಗಳು ಕತ್ತಲೆ) ಋಗ್ವೇದದಲ್ಲಿ ಸಂಕೇತಗಳಾಗಿ ಬಳಸಿ ಅವುಗಳಿಗೆ ದೇವ ಅಸುರರೆಂಬ ಮಾನವ ರೂಪವನ್ನು ಕೊಟ್ಟಿದ್ದಾರೆ. ಅವರು ಹಗಲನ್ನು ‘ದೇವಾ’ ಎಂದೂ ಕತ್ತಲನ್ನು ‘ಅಸುರ’ ಎಂದೂ ಕರೆದರು. ಋಗ್ವೇದದ ಆಖ್ಯಾನಗಳು ಹಗಲು ಮತ್ತು ಕತ್ತಲಿನ ನಡುವಿನ ಹೋರಾಟದ ಚಿತ್ರಣವನ್ನು ಪ್ರತಿಮಿಸುತ್ತವೆ. ಇದನ್ನು ‘Dawn theory’ ಎನ್ನುತ್ತಾರೆ. (ವಿವರಗಳಿಗೆ ಬಾಲಗಂಗಾಧರ ತಿಲಕರ “Arctic home in the Vedas” ಎಂಬ ಪುಸ್ತಕ ನೋಡಬಹುದು.) ಈ ‘Dawn theory’ಯ ಆಧಾರದ ಮೇಲೆ ರಾಮಾಯಣದ ಪಾತ್ರಗಳನ್ನು ಘಟನೆಗಳನ್ನು ವಿಶ್ಲೇಷಿಸುವ ಪ್ರಯತ್ನ ಇತ್ತೀಚಿಗೆ ನಡೆದಿದೆ (ಬಿ. ಆರ್. ಕೇಶವಯ್ಯಂಗಾರ್ ಅವರ “The Sun and orion themes in Valmiki Ramayana” ಎಂಬ ಪುಸ್ತಕ ಗಮನಿಸಬಹುದು) ರಾಮ ಸೂರ್ಯವಂಶದವನು. ಅವನು ಉದಯಿಸುತ್ತಿರುವ ವಸಂತದ ಸೂರ್ಯನಿಗೆ ಸಂಕೇತವಾದರೆ, ರಾವಣ ಈಗಿನ ಕಾಲದ ಹೇಮಂತ ಶಿಶಿರದ ಮುಳುಗುವ ಸೂರ್ಯನಿಗೆ ಸಂಕೇತವಾಗುತ್ತಾನೆ. ಸೀತೆಯ ಪಾತ್ರವು ಬೆಳಗಿನ ಉಷಃಕಾಲ, ಸಾಯಂಕಾಲದ ಸಂಧ್ಯಾ ಅಥವಾ ಉಷಃ ಕಾಲಕ್ಕೆ ಪ್ರತೀಕವಾಗುತ್ತದೆ. ರಾಮನ ಸಹಧರ್ಮಚರಿ ಸೀತೆಯಾದರೆ ಮಂಡೋದರಿ ರಾವಣನಿಗೆ ಅಧಿಕರಣ (ಆಧಾರ)ಸ್ವರೂಪಳು. ‘ಸೀತೆಯ ಪ್ರಕೃತಿ ನಿನಗೆ ದಕ್ಕುವಂತಹುದಲ್ಲ ನಾನು ನಿನ್ನ ಜೊತೆ ಯಾವಾಗಲೂ ಇರುವವ’ಳೆಂದು ಮಂಡೋದರಿ ರಾವಣನಿಗೆ ಉಪದೇಶಿಸುತ್ತಾಳೆ. ಸೂರ್ಯ ಉದಯಿಸುವ ಮೊದಲೆ ಉಷೆ ಬಂದಿದ್ದು ಸೂರ್ಯ ಹುಟ್ಟಿದ ನಂತರ ಮಾಯವಾಗುತ್ತಾಳೆ. ಸೂರ್ಯ ಮುಳುಗಿದ ಮೇಲೆ ಮತ್ತೆ ಸಂಧ್ಯಾ ಉಷ ಬರುತ್ತಾಳೆ. ಸೀತೆ ಉಷೆಗೆ ಪ್ರತೀಕವಾದುದರಿಂದ ಇದು ಅವಳ ಸಹಧರ್ಮ. ಅವಳು ಛಾಯೆ. ಜನಕನು ಸೀತಾ ಕಲ್ಯಾಣದ ಸಂದರ್ಭದಲ್ಲಿ ರಾಮನಿಗೆ ಹೇಳುವ ಈ ಮಾತು ಸೀತೆಯ ನೈಸರ್ಗಿಕ ಸ್ವಭಾವವನ್ನು ಧ್ವನಿಸುತ್ತದೆ.

ಇಯಂ ಸೀತಾ ಮಮಸುತಾ ಸಹಧರ್ಮ
ಚರೀತವ।
ಪ್ರತೀಚ್ಛ ಚೈನಾಂಭದ್ರಂತೇ ಪಾಣಿಂ
ಗೃಹ್ಣೀಷ್ವ ಪಾಣಿನಾ।
ಪತಿವ್ರತಾ ಮಹಾಭಾಗಾ ಛಾಯೇವ
ಅನುಗತಾ ಸದಾ॥
(1: 73. 26–27)

(ಇವಳು ಸೀತೆ ನನ್ನ ಮಗಳು. ನಿನ್ನ ಕಾರ್ಯದಲ್ಲಿ ಒಡನಾಡಿಯಾಗಿರುತ್ತಾಳೆ. ಈ ಸಜ್ಜನಳನ್ನು ಸ್ವೀಕರಿಸು, ಇವಳ ಕೈಹಿಡಿ. ನಿನಗೆ ನಿಷ್ಠಳಾಗಿ ಭಕ್ತಳಾಗಿ ಹೆಂಡತಿಯಾಗುತ್ತಾಳೆ. ಮಹಾಭಾಗೆಯಾಗಿರುತ್ತಾಳೆ. ಸದಾ ನೆರಳಿನಂತೆ ಅನುಸರಿಸುತ್ತಾಳೆ. ಇದು ಸಾಮಾನ್ಯ ಅರ್ಥ. ಇದಕ್ಕೆ ‘Dawn theory ಅನ್ವಯಿಸಿದರೆ ‘ಸಹಧರ್ಮಚರಿ; ‘ಛಾಯೇವ ಅನುಗತಾ ಸದಾ’ ಎಂಬ ಮಾತುಗಳು ಅತ್ಯಂತ ಅರ್ಥಪೂರ್ಣವಾಗಿ ಕಾಣುತ್ತವೆ. ಪ್ರಕೃತಿಯು ಕ್ರಮಬದ್ಧವಾಗಿ ನಡೆಯಲು ಸಹಕರಿಸುತ್ತಾ ಇವಳು ನಿನ್ನ ಛಾಯೆಯಂತಿರುತ್ತಾಳೆ. ನಿನ್ನ ಸಹಧರ್ಮಚಾರಿಣಿಯಾಗಿರುತ್ತಾಳೆ. ಈ ಮಾತು ರಾಮನಿಗೆ ಅನ್ವಯಿಸುತ್ತದೆ ಯಾದ್ದರಿಂದ ಸೀತೆಯ ಪ್ರಕೃತಿ ನಿನಗೆ ದಕ್ಕುವಂತಹುದಲ್ಲ ಎಂದು ಮಂಡೋದರಿ ರಾವಣನಿಗೆ ಹೇಳು

(24ನೇ ಪುಟ ನೋಡಿ)

# ಮಹರ್ಷಿ ಅತ್ರಿ

'ರಸಿಕ ಪುತ್ತಿಗೆ'

ಹಳೆಯ ಕಾಲದ ಮಾತಿದು. ಎಷ್ಟು ಹಳೆಯ ಕಾಲವೆಂದರೆ ನಾವು ಯೋಚಿಸಲೂ ಸಾಧ್ಯವಿಲ್ಲದಷ್ಟು. ಆಗ ಇಂದಿನಂತೆ ಶಾಲಾ ಕಾಲೇಜುಗಳಿದ್ದಿಲ್ಲ. ಪಾಠಶಾಲೆಗಳೂ ಇದ್ದಿಲ್ಲ. ನದೀತೀರದ ಕಾಡುಗಳಲ್ಲಿ ಋಷಿಗಳು ತಮ್ಮ ಆಶ್ರಮ ಕಟ್ಟುತ್ತಿದ್ದರು. ಅವರೂ ಅವರ ವಿದ್ಯಾರ್ಥಿಗಳೂ ಅಲ್ಲೇ ವಾಸಿಸುತ್ತಿದ್ದರು. ಋಷಿಗಳು ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡುತ್ತಿದ್ದರು. ತಾವೂ ಕಲಿಯುತ್ತಿದ್ದರು. ಸಂಶೋಧನೆ ಮಾಡುತ್ತಿದ್ದರು. ರಾಜರುಗಳು ಅವರ ಸಲಹೆಯಿಂದ ಶಾಸನ ಮಾಡುತ್ತಿದ್ದರು.

ಆಶ್ರಮಗಳು ಬಹಳ ಸುಂದರ. ಋಷಿಮುನಿಗಳ ಮಕ್ಕಳಂತೇ ಪಶುಪಕ್ಷಿಗಳೂ ಅಲ್ಲಿ ಓಡಾಡುತ್ತಿದ್ದವು. ಕೆಲವು ಕಡೆ ಹೂವು ಅರಳಿ—ಕೆಲವು ಕಡೆ ಹಣ್ಣು ಮಾಗಿ ಪರಿಮಳ ಸುತ್ತಿದ್ದವು. ಬೆಳ್ಳಿಯ ರಸದಂತೆ ಒಂದೆಡೆ ಸಂಗೀತದ ಧ್ವನಿ ಮೂಡುತ್ತಿತ್ತು.

ಇಂಥ ಒಂದು ಆಶ್ರಮದಲ್ಲಿ ಒಬ್ಬ ಋಷಿ ಇದ್ದ. ಅವನ ಹೆಸರು ಅತ್ರಿ. ಬಹಳ ಜ್ಞಾನಿ. ವೇದಗಳ ಹೆಸರು ಕೇಳಿದ್ದೀರಲ್ಲ? ಪ್ರಪಂಚದಲ್ಲಿ ಸಿಗುವ ಪುಸ್ತಕಗಳಲ್ಲಿ ಅತ್ಯಂತ ಹಳೆಯವು. ಅವುಗಳ ಕೆಲವು ಮಂತ್ರ ಅತ್ರಿ ಋಷಿಯ ರಚಿತ. ಅವನ ಆಶ್ರಮದಲ್ಲಿ ದೂರ ದೂರದಿಂದ ಬಂದ ವಿದ್ಯಾರ್ಥಿಗಳು ಕಲಿಯುತ್ತಿದ್ದರು.

ಒಂದು ಸಲ ಆ ದೇಶದ ರಾಜ—ಪ್ರಜೆಗಳಲ್ಲಿ ಜಗಳ ಉಂಟಾಯಿತು. ರಾಜ "ಶಾಸನದ ಅಧಿಕಾರ ನನಗೆ ಮಾತ್ರ" ಎನ್ನುತ್ತಿದ್ದ. ಪ್ರಜೆಗಳು—"ನಾವು ನಿನ್ನನ್ನು ರಾಜನನ್ನಾಗಿ ಮಾಡಿದ್ದೇನೋ ನಿಜ. ಆದರೆ ನೀನು ಮನ ಬಂದಂತೆ ವರ್ತಿಸುವ ಅಧಿಕಾರ ಹೊಂದಿಲ್ಲ". ಈ ರೀತಿ ಜಗಳ ವಿಕೋಪಕ್ಕೇರಿತು. ಕೆಲವರು ರಾಜನ ಪಕ್ಷ, ಕೆಲವರು ಪ್ರಜೆಗಳ ಕಡೆ, ಅತ್ರಿ ಋಷಿ ಪ್ರಜೆಗಳ ಪಕ್ಷ. ಆತನ ಹೇಳಿಕೆ –'ರಾಜ್ಯ ಪ್ರಜೆಗಳದ್ದೇ, ರಾಜ ಕೇವಲ ಪ್ರಜೆಗಳ ಪ್ರತಿನಿಧಿ ಮಾತ್ರ' ಅಂದರೆ ಪ್ರಜೆಗಳ ಪತಿಯಿಂದ ಆತ ಆಳಬಹುದು.

ಇದನ್ನು ಕೇಳಿದ ರಾಜ ಅಪ್ರಸನ್ನನಾದ. ಅತ್ರಿಋಷಿ ಯಾರ ಕಡೆ ಇರುವನೋ ಅವರೇ ಗೆಲ್ಲುವರೆಂದು ಆತ ಬಲ್ಲ. ಆದ್ದರಿಂದ ರಾಜ ಅತ್ರಿಯನ್ನು ಹಿಡಿಸಿ ಕಾರಾಗೃಹದಲ್ಲಿರಿಸಿದ. ತರತರದ ಯಾತನೆ ಕೊಡತೊಡಗಿದ. ಈ ಪೀಡೆಗಳಿಂದ ಅತ್ರಿ ರೋಗಿಯಾದ. ತೀವ್ರವಾದ ಜ್ವರ ಬಂತು. ಆಗ ಆತನ ಚಿಕಿತ್ಸೆಗೆ ವೈದ್ಯರನ್ನು ಕರೆಸಬೇಕಾಯಿತು. ಆಗ ಇಬ್ಬರು ಅವಳಿ ಜವಳಿ ಸಹೋದರ ವೈದ್ಯರಿದ್ದರು, ಅವರ ಹೆಸರು ಅಶ್ವನೀಕುಮಾರರು. ಅವರೇ ಅತಿ ದೊಡ್ಡ ವೈದ್ಯರು. ಅವರು ಬಂದು ಚಿಕಿತ್ಸೆ ಮಾಡಿದ ನಂತರ ಅತ್ರಿ ಗುಣಮುಖನಾದ.

ಹೀಗಿದ್ದ ಅತ್ರಿ ದೊಡ್ಡ ವಿದ್ವಾಂಸ, ಜ್ಞಾನಿ, ಪ್ರಜಾಹಿತ ಮಾಡುವವ. ನಿಜವೆಂದರೆ ಅತ್ರಿ ಒಬ್ಬ ವ್ಯಕ್ತಿಯ ಹೆಸರಲ್ಲ. ಎಲ್ಲಕ್ಕಿಂತ ಮೊದಲು ಆಶ್ರಮ ಸ್ಥಾಪಿಸಿದ ಋಷಿಯ ಹೆಸರು ಅತ್ರಿ. ಅನಂತರ ಆ ಆಶ್ರಮದ ಪೀಠವೇರಿದವರೆಲ್ಲರೂ ಅತ್ರಿಯೆನಿಸಿಕೊಂಡರು. ಈ ರೀತಿ ಹಲವಾರು ನೂರಾರು ಅತ್ರಿಗಳಾಗಿ ಹೋದರು. ಆದರೆ ಅವರೆಲ್ಲರೂ ವಿದ್ವಾಂಸರೂ ಜ್ಞಾನಿಗಳೂ ಆಗಿದ್ದರು.

ಶ್ರೀರಾಮಚಂದ್ರ ಚಿತ್ರಕೂಟಕ್ಕೆ ವನವಾಸಕ್ಕಾಗಿ ಹೋದಾಗ ಅತ್ರಿ ಮುನಿಯ ಆಶ್ರಮಕ್ಕೂ ಹೋದ. ಆತನ ಮಡದಿಯ ಹೆಸರು ಅನಸೂಯ. ಆಗ ಅವರಿಬ್ಬರೂ ಬಹಳ ಮುದುಕರಾಗಿದ್ದರು. ಕೂದಲು ಬೆಳ್ಳಗಾಗಿ ಶರೀರ ಸುಕ್ಕುಗಟ್ಟಿತ್ತು. ಆದರೆ ಇಬ್ಬರೂ ಬಹಳ ಸ್ನೇಹದಿಂದ ಸೀತಾರಾಮಲಕ್ಷ್ಮಣರನ್ನು ಸ್ವಾಗತಿಸಿದರು. ಆಶ್ರಮಕ್ಕೆ ಕರೆದುಕೊಂಡು ಹೋಗಿ ಕಂದ ಮೂಲಾದಿಗಳನ್ನಿತ್ತು ಸತ್ಕರಿಸಿದರು. ವಿಶೇಷವಾಗಿ ಅನಸೂಯಾದೇವಿ ಸೀತೆಯ ಬಗೆಗೆ ಬಹಳ ಸ್ನೇಹ ಪ್ರಕಟಿಸಿದಳು. ನಾನಾ ಪ್ರಕಾರದ ಉಪದೇಶ ಆಶೀರ್ವಾದಗಳನ್ನಿತ್ತಳು. ಆಕೆ ಸೀತೆಗೆ ಉಪದೇಶ ಕೊಡುತ್ತ 'ಆಪತ್ತು ಒಂದಾಗ ಧೈರ್ಯ, ಮಿತ್ರ, ಧರ್ಮ ಹಾಗೂ ನಾರಿಯ ಪರೀಕ್ಷೆಯಾಗುತ್ತದೆ' ಎಂದಳು. ಬೀಳ್ಕೊಡುವಾಗ ಅನೇಕ ಸುಂದರ ವಸ್ತು, ಎಂದಿಗೂ ಬಾಡದ ಹೂ ಮಾಲೆಗಳ-ಉಡುಗೊರೆ ಕೊಟ್ಟಳು. ಅನಸೂಯಾ ಬಹಳ ದೊಡ್ಡ ತಪಸ್ವಿನಿಯಾಗಿದ್ದಳು. ಆಕೆ ತನ್ನ ಬುದ್ಧಿವಂತಿಕೆಯಿಂದ ಆಶ್ರಮದ ಭೂಮಿಯನ್ನು ಬಹಳ ಪರಿಶ್ರಮದಿಂದ ಫಲವತ್ತಾಗಿ ಮಾಡಿದ್ದಳು. ಈಕೆಯ ಬುದ್ಧಿವಂತಿಕೆಯಿಂದಲೇ ಆ ಪ್ರದೇಶದಲ್ಲಿ ಬರಗಾಲ ಬರುತ್ತಿರಲಿಲ್ಲ. ಬೇರೆ ಋಷಿಗಳು ಆಕೆಯನ್ನು ಬಹಳ ಗೌರವಿಸುತ್ತಿದ್ದರು. ಈಕೆಗೆ ಮೂರು ಮಕ್ಕಳು ದುರ್ವಾಸ,ದತ್ತಾತ್ರೇಯ ಹಾಗೂ ಸೋಮ ಎಂಬುವರು. ದುರ್ವಾಸ ಬಹಳ ಕೋಪಿಷ್ಠ. ಬಹಳ ಸಿಟ್ಟಿನವರನ್ನು ನಾವು ದೂರ್ವಾಸನಿಗೆ ಹೋಲಿಸುತ್ತೇವೆ. ಈತ ಯಾವಾಗಲೂ ಜನರನ್ನು ಪರೀಕ್ಷಿಸುತ್ತ ತಿರುಗುತ್ತಿದ್ದ. ತಿಳಿದೋ ತಿಳಿಯದೆಯೋ ಜನರಿಂದೇನಾದರೂ ತಪ್ಪಾದರೆ, ಈತನ ಅನಾದರಣೆಯಾದರೆ ಒಡನೇ ಶಾಪ ಕೊಡುತ್ತಿದ್ದ. ಹಲವಾರು ಸಲ ತನ್ನ ಸಿಟ್ಟಿನಿಂದಾಗಿ ಈತನಿಗೆ ಕಷ್ಟ ದುಃಖಗಳು ಬರುತ್ತವೆ. ಕ್ರೋಧಿಯು ದುಃಖ ಅನುಭವಿಸಲೇಬೇಕಲ್ಲಾ? ಇದಕ್ಕೆ ವಿಪರೀತವಾಗಿ ಈತನ ತಮ್ಮ ಸೋಮ. ಸೋಮನೆಂದರೆ ಚಂದ್ರ. ಚಂದ್ರನೆಷ್ಟು ಶಾಂತನೆಂದು ಬಲ್ಲೆವು. ದತ್ತಾತ್ರೇಯ ಕೇವಲ ಶಾಂತನು ಮಾತ್ರವಲ್ಲ ಜ್ಞಾನಿಯೂ ಆಗಿದ್ದ. ಯಾವಾಗಲೂ ಜ್ಞಾನವನ್ನು ಅರಸುತ್ತಾ ತಿರುಗುತ್ತಿದ್ದ. ಎಲ್ಲಾದರೂ ಒಳಿತನ್ನು ಕಂಡರೆ, ಯಾರಲ್ಲಾದರೂ ಒಳ್ಳೆಯ ಗುಣ ಕಂಡರೆ ಒಡನೇ

ಆತನನ್ನು ತನ್ನ ಗುರುವೆಂದು ಭಾವಿಸುತ್ತಿದ್ದ. ಇವನಿಗೆ 26 ಜನ ಗುರುಗಳಿದ್ದರು. ಅವುಗಳಲ್ಲಿ ಕಟುಕ, ನಾಯಿಯೂ ಕೂಡ. ಇವನ ಶಿಷ್ಯರಲ್ಲಿ ಅನೇಕ ರಾಜ, ತಪಸ್ವಿ ಋಷಿ, ಮುನಿ ಹಾಗೂ ಯೋಗಿಗಳಿದ್ದರು.

ಅತ್ರಿ ಕೇವಲ ಶಾಸ್ತ್ರಿ ಮಾತ್ರವಲ್ಲ ವಿಜ್ಞಾನಿಯೂ ಹೌದು. ಸೂರ್ಯಚಂದ್ರರಿಗೆ ಗ್ರಹಣ ಹೇಗಾಗುತ್ತದೆ ಎಂಬುದನ್ನು — ಈತನೇ ಮೊದಲು ಕಂಡು ಹಿಡಿದನೆಂದು ಹೇಳುತ್ತಾರೆ. ಹೇಗೆ ಕಂಡು ಹಿಡಿದನೆಂದು ಇನ್ನೂ ಸರಿಯಾಗಿ ತಿಳಿದಿಲ್ಲ. ಇದರಿಂದ ಋಷಿಗಳು ಕೇವಲ ಓದು, ಓದಿಸುವುದರಲ್ಲೇ ಮಗ್ನರಾಗಿರದೆ ನಕ್ಷತ್ರ ವಿದ್ಯೆಯಲ್ಲಿಯೂ ಆಸಕ್ತರಾಗಿದ್ದರೆಂದು ತಿಳಿಯುತ್ತದೆ.

ಇನ್ನೊಬ್ಬ ಅತ್ರಿ ಋಷಿ ಇದ್ದ. ಆತನ ಮಗಳ ಹೆಸರು ಅಪಾಲ ಎಂದು. ಇವಳಿಗೆ ಕುಷ್ಠರೋಗ ಬಂತು. ಆಕೆ ಇಂದ್ರನನ್ನು ಪೂಜಿಸಿದಳು. ಇಂದ್ರ ಪ್ರಸನ್ನನಾಗಿ ಆಕೆಯ ಕುಷ್ಠರೋಗ ದೂರ ಮಾಡಿದ — ನಂತರ ಅಪಾಲ ಸುಂದರ ಸ್ತ್ರೀಯಾದಳು. ಈ ಅತ್ರಿ ಋಷಿಯ ಮಗನ ಹೆಸರು ಅರ್ಜನಾನಾ ಎಂದು. ಈತನೂ ತಂದೆಯಂತೆಯೇ ಋಷಿ. ಈತನ ಮಗನ ಹೆಸರು ಶ್ಯಾವಾಶ್ವನೆಂದು. ಈತನು ಬಹಳ ಸುಂದರನೂ, ಗುಣಿಯೂ ವಿದ್ವಾಂಸನೂ ಆಗಿದ್ದ. ತಂದೆಯ ಇಚ್ಛೆ, ತನ್ನ ಮಗನ ಮದುವೆ ದೇಶದ ರಾಜನಾದ ರಥಬೀತಿಯ ಮಗಳೊಡನೆ ಆಗಬೇಕೆಂದು. ಆದರೆ ರಾಣಿ ಶ್ಯಾವಾಶ್ವನಿಗೆ ಮಗಳನ್ನು ಕೊಡಲು ನಿರಾಕರಿಸಿದಳು. ಆತ ಕಾಡಾಡಿ, ನಿರ್ಧನನೆಂದಲ್ಲ. ಆತ ಋಷಿಯಲ್ಲವೆಂಬ ಕಾರಣದಿಂದ ಆಕೆ ಒಪ್ಪಲಿಲ್ಲ ಅಷ್ಟೆ. ಅರ್ಜನಾನಾ ಋಷಿಯಾಗಿದ್ದ ತಾತ ಅತ್ರಿ ಋಷಿಯಾಗಿದ್ದ. ಅವರ ಶ್ಯಾವಾಶ್ವ ಋಷಿಯಾಗಿರಲಿಲ್ಲ.

ಈ ಮಾತಿನಿಂದ ಅರ್ಜನಾನಾನಿಗಾಗಲೀ, ಶ್ಯಾವಾಶ್ವನಿಗಾಗಲೀ ಬೇಸರವಾಗಲಿಲ್ಲ, ಶ್ಯಾವಾಶ್ವ ಅಂದಿನಿಂದಲೇ ಘೋರ ತಪಸ್ಸನ್ನಾಚರಿಸಿ ವೇದ ಮಂತ್ರಗಳನ್ನು ರಚಿಸುವಷ್ಟು ಶಕ್ತಿ ಪಡೆದು ಋಷಿಯಾದ. ಒಡನೆ ರಥಬೀತಿಯ ಬಳಿಗೆ ಹೋದ. ಆತನನ್ನು ನೋಡಿ ರಾಜ ರಾಣಿಯರು ಸಂತಸದಿಂದ ತಮ್ಮ ಮಗಳನ್ನು ಮದುವೆ ಮಾಡಿಕೊಟ್ಟರು.

ಈ ಕತೆಯಿಂದ ಆಗಿನ ಕಾಲದ ರಾಜರು ಋಷಿಗಳನ್ನು ಗೌರಸುತ್ತಿದ್ದರೆಂದೂ, ಋಷಿಗಳೂ ಅಹಂಕಾರಿಗಳಾಗದೆ ಯಾವಾಗಲೂ ಸತ್ಯವನ್ನು ಶಿರಸಾವಹಿಸುತ್ತಿದ್ದರೆಂದೂ ತಿಳಿದು ಬರುತ್ತದೆ. ಆದುದರಿಂದ ನಾವು ಇಷ್ಟು ಕಾಲದ ನಂತರವೂ ಅವರನ್ನು ನೆನೆಯುತ್ತೇವೆ.

(ವಿವಿಧ ಮೂಲಗಳಿಂದ)

---

# ಭಿನ್ನ ಭಾವ ಬಿಟ್ಟು ಬನ್ನಿರಿ

—ಜಯಸಿಂಹ

ಭಿನ್ನ ಭಾವ ಬಿಟ್ಟು ಬನ್ನಿರಿ
ಮಕ್ಕಳಿರಾ,
ಒಂದುಗೂಡಿ ಮುಂದೆ ಬನ್ನಿರಿ ||

ಮೇಲು ಕೀಳು ಎಂಬ ಭೇದ
ಕೋಪ ತಾಪ ಒಂದೂ ಬೇಡ,
ಜಾತಿ ಮತದ ಜಗಳ ಬಿಟ್ಟು
ಧ್ಯೇಯ ದಾರಿ ಹಿಡಿದು ಬನ್ನಿ || ೧

ಸಹನೆಯೊಂದು ದೊಡ್ಡ ಸಾಧನ
ಬಾಳಿನಲ್ಲಿ,
ಮುಂದೆ ಬರಲು ವಿನಯಕಾರಣ |
ಸತ್ಯವೆಂಬ ಧ್ವಜವ ಹಿಡಿದು
ಶಾಂತಿಯೆಂಬ ಮಂತ್ರ ಪಠಿಸಿ
ಪ್ರೇಮದಿಂದ ನಗುವ ಸೂಸಿ
ತ್ಯಾಗಶೀಲರಾಗಿ ಬನ್ನಿ || ೨

ಸ್ವರ್ಗಕಿಂತ ಮಿಗಿಲು ಕೇಳಿರಿ
ಭರತಭೂಮಿ,
ಹೊನ್ನು ಬೆಳೆವ ನಾಡು ನೋಡಿರಿ |
ವಿಶ್ವದಲ್ಲಿ ಭರತ ಮಾತೆ
ಹಿರಿಯಳಾಗಿ ಮೆರೆಯ ಬೇಕು.
ಧೈರ್ಯದಿಂದ ಎದೆಯಸೆಟೆಸಿ
ತಾಯಸೇವೆ ಮಾಡಬನ್ನಿ || ೩

# ಆತ್ಮ ವಿಶ್ವಾಸ



ಪ್ರತಿ ದಿನ ಈಶ್ವರನಿಗೆ ಷೋಡಶೋಪಚಾರ ಪೂಜೆ ಮಾಡದೆ ಊಟ ಮಾಡುತ್ತಿರಲಿಲ್ಲ ಅರ್ಜುನ. ಇದು ಅವನ ಪ್ರತಿ ದಿನದ ನಿಯಮವಾಗಿತ್ತು. ಅರಣ್ಯವಾಸದ ಸಮಯದಲ್ಲಂತೂ ಪಂಚಪಾಂಡವರು ಒಟ್ಟಿಗೆ ಊಟಕ್ಕೆ ಕುಳಿತುಕೊಳ್ಳುತ್ತಿದ್ದರು. ಒಂದು ದಿನ ಅವರುಗಳು ಇಳಿದುಕೊಂಡಿದ್ದಂತಹ ಸ್ಥಳದ ಸುತ್ತಮುತ್ತಲಲ್ಲಿ ಎಲ್ಲಿಯೂ ಶಿವ ಮಂದಿರವಿರಲಿಲ್ಲ. ಭೀಮಸೇನನಿಗೆ ಅಂದು ಬಲವಾದ ಹೊಟ್ಟೆ ಹಸಿವು. ಅರ್ಜುನನು ಈಶ್ವರನ ಪೂಜೆಯಿಲ್ಲದೆ ಊಟಮಾಡುವುದಿಲ್ಲ; ಈ ಪ್ರದೇಶದಲ್ಲೋ ದೂರದವರವಿಗೂ ಒಂದಾದರೂ ಶಿವಮಂದಿರ ಕಾಣುತ್ತಿಲ್ಲ; ಇನ್ನೂ ಬಹಳ ಸಮಯದವರಗೆ ತನಗೆ ಉಪವಾಸವಲ್ಲ ಎಂದು ಚಿಂತಿಸಿದ. ಇದಕ್ಕೇನು ಉಪಾಯ ಎಂದು ಯೋಚಿಸಿದ.

ಇದರ ಬಗೆಗೆ ಯೋಚಿಸುತ್ತಾ ಅವನು ಕಾಡಿನಲ್ಲಿ ಸುತ್ತಾಡುತ್ತಿರುವಾಗ ಶಿವಲಿಂಗದ ಆಕಾರದ ತಾಳೆಯ ಮರದ ಭಾಂಡವೊಂದು ಅವನ ಕಣ್ಣಿಗೆ ಬಿದ್ದಿತು. ಅದನ್ನು ನೋಡಿದ ಕೂಡಲೇ ಅವನ ತಲೆಯುಲ್ಲಿ ಒಂದು ಉಪಾಯ ಹೊಳೆಯಿತು. ಅವನು ಕೂಡಲೆ ನೆಲದಲ್ಲಿ ಸ್ವಲ್ಪಭಾಗ ಅಗೆದು, ತಾಳೆಯ ಭಾಂಡವನ್ನು ತಲೆಕೆಳಗಾಗಿ ಹೂತು, ಅದರ ಮೇಲೊಂದಷ್ಟು ನೀರನ್ನು ಪ್ರೋಕ್ಷಿಸಿ, ಪುಷ್ಪಗಳನ್ನು ಚೆಲ್ಲಿದನು. ನೋಡಿದವರಿಗೆ ಯಾರಿಗಾದರೂ ಅದು ಶಿವಲಿಂಗದಂತಹ ಭಾವನೆ ಬರುವಂತಾಯಿತು. ಇನ್ನು ಅರ್ಜುನನಿಗೆ ಅದರಲ್ಲಿ ಅನುಮಾನ ಹೇಗೆ ಉಂಟಾಗುತ್ತದೆ?

ಭೀಮಸೇನನು ತಮ್ಮ ನಿವಾಸಸ್ಥಾನಕ್ಕೆ ಹಿಂತಿರುಗಿ ಮಂದಿರವೊಂದು ಸಿಕ್ಕಿದೆಯೆಂದೂ ಬೇಗ ಹೋಗಿ ಪೂಜೆ ಮಾಡಿಕೊಂಡು ಬರಬೇಕೆಂದೂ ಅರ್ಜುನನಿಗೆ ತಿಳಿಸಿದನು. ಅದರಂತೆ ಅರ್ಜುನನು ಹೋಗಿ ಪೂಜೆ ಮಾಡಿಕೊಂಡು ಬಂದ ಮೇಲೆ ಎಲ್ಲ ಸಹೋದರರೂ ಕುಳಿತು ಊಟ ಮಾಡತೊಡಗಿದರು.

ಊಟವಾದ ಮೇಲೆ ಎಲ್ಲರೂ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದಂತೆ, ಭೀಮನು ಬಿದ್ದು ಬಿದ್ದು ನಗತೊಡಗಿದನು, ಅರ್ಜುನನು ಏಕೆಂದು ಕೇಳಿದನು,

"ಇಂದು ನೀನು ಪೂಜೆ ಮಾಡಿದ ಶಿವಲಿಂಗವು ನಿಜವಾಗಿಯೂ ಶಿವಲಿಂಗವೆಂಬುದು ನಿನಗೆ ಗೊತ್ತೇನು?

ಸಹಜವಾಗಿಯೇ ಅರ್ಜುನನು ಹೇಳಿದನು.

"ನೀನೇ ಅಲ್ಲವೇನಣ್ಣ ಆ ಶಿವ ಮಂದಿರದ ಬಗ್ಗೆ ನನಗೆ ಹೇಳಿದ್ದು. ಆದರಿಂದ ಅದು ಶಿವಲಿಂಗ ಎನ್ನುವುದರಲ್ಲಿ ಅನುಮಾನವೇನಿದೆ!"

"ಇದರಿಂದಲೇ ನಿನ್ನನ್ನು ಈ ಪ್ರಶ್ನೆ ಕೇಳಿದ್ದು. ಏಕೆಂದರೆ ಅದು ಶಿವಲಿಂಗವಲ್ಲ; ತಾಳೆಮರದ ಭಾಂಡವಾಗಿತ್ತು."

ಆಶ್ಚರ್ಯಗೊಂಡ ಅರ್ಜುನನು ಕೇಳಿದ "ಇದು ಹೇಗೆ ಸಾಧ್ಯಾನಣ್ಣ? ... ಉಹುಂ, ನಿಜವಿರಲಾರದು!"

ನಕುಲ, ಸಹದೇವರಿಗೂ ಭೀಮನ ವಿಚಾರ ಮುಂಚೆಯೇ ಗೊತ್ತಿತ್ತು. ಅದರಿಂದ ಭೀಮಸೇನನೊಂದಿಗೆ ಅವರೂ ನಗತೊಡಗಿದರು. ಮಾತು ಬೆಳೆಯುತ್ತಿರುವುದನ್ನು ನೋಡಿದ ಧರ್ಮರಾಜನು ಆ ಸ್ಥಳಕ್ಕೆ ಹೋಗಿ, ಪರೀಕ್ಷೆಮಾಡಿ, ಈ ವಿಷಯದ ಬಗ್ಗೆ ನಿರ್ಣಯಿಸುವ ಎಂದು ಹೇಳಿದನು. ಎಲ್ಲರೂ ಒಪ್ಪಿದರು.

ಪಂಚಪಾಂಡವರು ಆ ಮಂದಿರದ ಸ್ಥಳವನ್ನೂ ತಲುಪಿದರು. "ನಿನ್ನ ಮಾತು ನಿಜವೆನ್ನುವಂತಿದ್ದರೆ, ಈ ಭಾಂಡವನ್ನು ಕದಲಿಸು!" ಎಂದು ಧರ್ಮರಾಜನು ಭೀಮಸೇನನಿಗೆ ಹೇಳಿದನು.

ಸ್ವತಃ ತನ್ನ ಕೈಗಳಿಂದಲೇ ತಾಳೆಯ ಭಾಂಡವನ್ನು ಹುಗಿದಿದ್ದ. ಆಶ್ಚರ್ಯ! ಸಾವಿರ ಆನೆಗಳ ಬಲವುಳ್ಳ ಭೀಮನ ಕೈನಲ್ಲಿ ಆ ತಾಳೆಯ ಭಾಂಡವನ್ನು ಕದಲಿಸಲಾಗಲಲ್ಲ. ಒಂದು ಜೂರೂ ಅದು ಕದಲಲಿಲ್ಲ. ಭೀಮನು ಆಶ್ಚರ್ಯಚಕಿತನಾಗಿ, ಲಜ್ಜಾಪೂರಿತ ನೇತ್ರಗಳಿಂದ ನೋಡ ತೊಡಗಿದ.

ಪರಿಸ್ಥಿತಿಯನ್ನು ಧರ್ಮರಾಜನು ಅರ್ಥ ಮಾಡಿಕೊಂಡನು. ಬಹುಶಃ ಭೀಮಸೇನ, ಅರ್ಜುನ – ಇಬ್ಬರ ಮಾತಿನಲ್ಲಿಯೂ ಸತ್ಯಾಂಶವಿರಬಹುದು. ಈ ಸನ್ನಿವೇಶದ ಸತ್ಯತೆಯ ವಿಶ್ಲೇಷಣೆ ಮಾಡುತ್ತಾ ಹೇಳಿದ "ಸಹೋದರರೆ! ಇದು ತಾಳೆಯ ಭಾಂಡದ ವಿಚಾರವಲ್ಲ; ಆತ್ಮ ವಿಶ್ವಾಸದ ಮಾತಿದು, ಪರಮಾತ್ಮನಲ್ಲಿ ಪೂರ್ಣ ನಿಷ್ಠೆ ಇದ್ದಲ್ಲಿ; ತಾಳೆಯ ಭಾಂಡವು ಶಿವಲಿಂಗವಾಗಿ ಮಾರ್ಪಡುವುದರಲ್ಲಿ ಆಶ್ಚರ್ಯವಿಲ್ಲ!"

ರಘುಸುತ

# ಶ್ರೀ ವೇಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೇಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು. ಸೋಮ, ಮಂಗಳ, ಬುಧ. ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | | ಶುಕ್ರವಾರಗಳಲ್ಲಿ | |
|---|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ | ಪ್ರಾ 7–30 | ಪ್ರಾ 8–30 |
| | | | ಸಮರ್ಪಣ | ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ 2ನೇ ಗಂಟೆ | ಪ್ರಾ 10–00 | ಪ್ರಾ 10–30 | | ಪ್ರಾ 9–30 | ಪ್ರಾ 10–30 |
| *ಅರ್ಜಿತ ಕಲ್ಯಾಣೋತ್ಸವ | | | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ ರಾತ್ರಿ ಗಂಟೆ | ಸಂ 6–30 | ರಾ 7–00 | | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | | ರಾ 8–45 | ರಾ 9–00 |

| | |
|---|---|
| *ಅರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

( 20ನೇ ಪುಟದಿಂದ)

ವುದರಲ್ಲಿ ವಿಶೇಷವಾದ ಧ್ವನಿತಾರ್ಥವನ್ನು ಗುರುತಿಸಬಹುದು.

ರವಿ ಆಕಾಶಕೆ ಭೂಷಣ, ಆಕಾಶವು ರವಿಗೆ ಭೂಷಣ ಹೀಗೆ ಇವು ಒಂದಕ್ಕೊಂದು ಪೂರಕ ಮಂಡೋದರಿ–ರಾವಣರು ಒಬ್ಬರಿಗೊಬ್ಬರು ಅಲಂಕಾರಪ್ರಾಯರೆಂದು ಚಿತ್ರಿತರಾಗಿದ್ದಾರೆ.

ವಾಲ್ಮೀಕಿ ರಾಮಾಯಣದ ಇನ್ನಿತರ ಪಾತ್ರಗಳನ್ನು ಪ್ರಸಂಗಗಳನ್ನು ಇದೇ ರೀತಿ ನೈಸರ್ಗಿಕ ಸಂಕೇತಗಳಾಗಿ ವಿಶ್ಲೇಷಿಸಬಹುದು. ಸೂರ್ಯವಂಶದವನಾದ ರಾಮನ ಪಾತ್ರವು ಸೂರ್ಯನಿಗೆ ಪ್ರತೀಕವಾಗುತ್ತದೆ. ಆಕಾಶದಲ್ಲಿ ಸೂರ್ಯ ಮತ್ತು ಅವನ ಚಲನೆಯನ್ನು ರಾಮಾಯಣವು ತಿಳಿಸುವುದರಿಂದ ರಾಮಾಯಣವನ್ನು "ಸೂರ್ಯಾಯಣ"ವೆಂದೂ ಕರೆಯಬಹುದು ಈ ಸಂದರ್ಭದಲ್ಲಿ,

ಯಾವತ್ ಸ್ಥಾಸ್ಯನ್ತಿ ಗಿರಿಯಃ ಸರಿತಶ್ಚ
ಮಹೀತಲೇ ।
ತಾವದ್ರಾಮಾಯಣ ಕಥಾ ಲೋಕೇಷು
ಪ್ರಚರಿಷ್ಯತಿ ॥
(1: 2: 36–37)

("ಎಲ್ಲಿಯವರೆಗೆ ಭೂಮಿಯಲ್ಲಿ ಗಿರಿಗಳೂ ನದಿಗಳೂ ಇರುವುವೋ ಅಲ್ಲಿಯವರೆಗೆ ರಾಮಾಯಣ ಕಥೆಯು ಲೋಕಗಳಲ್ಲಿ ಅಂದರೆ ಭೂಮ್ಯಾಕಾಶ, ಅಂತರಿಕ್ಷ ಮತ್ತು ದ್ಯುಲೋಕಗಳಲ್ಲಿ ಪ್ರಚಾರವಾಗುತ್ತವೆ") ಎಂಬ ಅಮರ ವಾಣಿಯು ಎಷ್ಟು ಅರ್ಥ ಪೂರ್ಣವಾಗಿದೆ ಎನಿಸುತ್ತದೆ. ★

---

( 19 ನೇ ಪುಟದಿಂದ )

ಆ ನಂತರ ಇಂದ್ರಾಣೀದೇವಿಯ ಪೂಜೆಯನ್ನು ಚಿನ್ನ, ಬೆಳ್ಳಿ, ಮೊಸರು, ಅಕ್ಷತೆ, ಧೂಪ, ದೀಪ, ಮತ್ತು ನೈವೇದ್ಯ-ಮುಂತಾದವ್ರಗಳಿಂದ ಮಾಡಿ, ಆ ದ್ರವ್ಯಗಳಿಗೆ ನಮಸ್ಕಾರಮಾಡಿ ಭಕ್ತಿಯಿಂದ ಪ್ರಾರ್ಥನೆಮಾಡುತ್ತ ಶ್ರೇಷ್ಠ ಬ್ರಾಹ್ಮಣರಿಗೆ ಆ ಚಿನ್ನ, ಬೆಳ್ಳಿ ಮುಂತಾದ ದ್ರವ್ಯಗಳನ್ನು ಸಮರ್ಪಿಸಿ ನಮಸ್ಕಾರ ಮಾಡಬೇಕು. ನಂತರ ಬ್ರಾಹ್ಮಣರಿಗೆ ಭೋಜನ ಮಾಡಿಸಿ ತಾವೂ ಊಟ ಮಾಡಬೇಕು. ಈ ರೀತಿ ಭಕ್ತಿ ಭಾವದಿಂದ ದ್ರವ್ಯದಾನ ಮಾಡುವ ಮನುಷ್ಯನು ಧನಾಧ್ಯಕ್ಷನಾದ ಕುಬೇರನ ಅನುಗ್ರಹದಿಂದ ಸಕಲ ದ್ರವ್ಯಗಳ ಸಮೃದ್ಧಿಯನ್ನು ಹೊಂದುತ್ತಾನೆ.

ಭಾದ್ರಪದಮಾಸ ಕೃಷ್ಣಪಕ್ಷದ ಪಂಚಮಿಯದಿನ ಹಾಲಿನಿಂದ ನಾಗಗಳಿಗೆ ಅಭಿಷೇಕಮಾಡಿ ಹಾಲನ್ನು ನಿವೇದಿಸಿ ತೃಪ್ತಿ ಪಡಿಸಬೇಕು. ಈ ನಾಗಪೂಜೆಯನ್ನು ಮಾಡುವವನ ಮುಂದಿನ ಏಳು ಪೀಳಿಗೆಗಳಲ್ಲಿ ನಾಗಗಳ ಭಯವಿಲ್ಲದೇ ಸುಖವಾಗಿರುತ್ತಾರೆ. ★

# ಯೋಗದ ಪ್ರಾಚೀನತೆ

ಯೋಗೇನ ಚಿತ್ತಸ್ಯ ಪದೇನ ವಾಚಾಂ
ಮಲಂ ಶರೀರಸ್ಯತು ವೈದ್ಯಕೇನ ।
ಯೋಪಾಕರೋತ್ತಂ ಪ್ರವರಂ ಮುನೀನಾಂ
ಪತಂಜಲಿಂ ಪ್ರಾಂಜಲಿರಾನತೋಸ್ಮಿ ॥

ಪ್ರಾಚೀನ ಭಾರತವು ಅಧ್ಯಾತ್ಮ ಜೀವಿಗಳ ತೌರುಮನೆಯಾಗಿತ್ತು. ನಮ್ಮ ಪೂರ್ವಜರು ತಪೋನಿಷ್ಠರಾಗಿದ್ದರು. ಪ್ರಾಪಂಚಿಕ ವ್ಯವಹಾರಗಳ ಬಗ್ಗೆ ಗಮನ ನೀಡುತ್ತಿದ್ದರೂ, ಅವರ ಹೆಚ್ಚಿನ ಆಲೋಚನೆ ಮೇಲ್ಮಟ್ಟದ್ದಾಗಿತ್ತು. ಅವರು ಜೀವನದ ಗುರಿಯ ಬಗ್ಗೆ ಚಿಂತಿಸತೊಡಗಿದರು, 'ಕೋಽಹಂ'–ಅಂದರೆ ನಾನು ಯಾರು ? ಎಂಬ ಪ್ರಶ್ನೆ ಅವರನ್ನು ಕಾಡತೊಡಗಿತು. ಇದಕ್ಕೆ ಕಾರಣ ನಾವು ನಮ್ಮ ಬಗ್ಗೆ ಹೇಳಿಕೊಳ್ಳುವಾಗ 'ನನ್ನ ಶರೀರ. ನನ್ನ ಬುದ್ಧಿ, ನನ್ನ ಮನಸ್ಸು' ಎನ್ನುತ್ತೇವೆ. ನಾನೇ ಈ ಶರೀರವಾಗಿದ್ದಿದ್ದರೆ 'ನನ್ನ ಶರೀರ'ವೆಂದು ಹೇಳಿಕೊಳ್ಳುವ ಅಗತ್ಯವಿರಲಿಲ್ಲ. ಆದ್ದರಿಂದ ಈ 'ನಾನು' ಎಂಬುದು ಪ್ರತ್ಯೇಕವಾಗಿಯೇ ಉಳಿಯಿತು. ಹಾಗಾದರೆ ನಾನು ಯಾರು ? ಎಲ್ಲಿಂದ ಬಂದೆ ? ಇಲ್ಲಿಗೆ ಬಂದ ಉದ್ದೇಶವೇನು ? ಮತ್ತೆ ಎಲ್ಲಿಗೆ ಹೋಗಬೇಕು ? ಈ ಅಪಾರ ಬ್ರಹ್ಮಾಂಡಕ್ಕೂ ನನಗೂ ಇರುವ ಸಂಬಂಧವೇನು ? ಇವೆಲ್ಲವನ್ನೂ ನಡೆಸುತ್ತಿರುವ ಅವ್ಯಕ್ತ ಶಕ್ತಿ ಯಾವುದು ? –ಈ ಜಟಿಲ ಪ್ರಶ್ನೆಗಳು ಅವರನ್ನು ಕಾಡತೊಡಗಿದವು. ಅವರ ಆ ಚಿಂತನೆಯ ಫಲವೇ ಯೋಗವಿದ್ಯೆಯ ಉದಯಕ್ಕೆ ನಾಂದಿಯಾಯಿತು.

## ಪ್ರಾಗೈತಿಹಾಸಿಕ ಸಾಕ್ಷ್ಯ

ಅಮೂಲ್ಯವಾದ ವಿದ್ಯೆಯೊಂದು ಬೆಳಕಿಗೆ ಬಂದಾಗ ಅದರ ಪ್ರಾಚೀನತೆ ಹಾಗೂ ಕರ್ತೃತ್ವದ ಬಗ್ಗೆ ಲೋಗರ ಗಮನ ಹರಿಯುವುದು ಸ್ವಾಭಾವಿಕವೇ. ಯೋಗಶಾಸ್ತ್ರವು ಅತಿಪ್ರಾಚೀನವೆಂದು ಹೇಳಬಹುದೇ ಹೊರತು ಅದು ಎಂದು ಪ್ರಾರಂಭವಾಯಿತು ಎಂದು ನಿರ್ದಿಷ್ಟವಾಗಿ ಹೇಳುವುದು ಕಷ್ಟ. ಆದರೂ ನಮಗೆ ಉಪಲಬ್ಧವಿರುವ ಕೆಲವು ಪುರಾಣಗಳ ಪ್ರಕಾರ ಯೋಗವಿದ್ಯೆಯು ಸುಮಾರು 4000 ವರ್ಷಗಳ ಹಿಂದೆಯೇ ಭಾರತದಲ್ಲಿ ಪ್ರಚಾರದಲ್ಲಿತ್ತು. ಸಂಸ್ಕೃತಿಯ ಕೀರ್ತಿಶೇಷವಾಗಿರುವ ಹರಪ್ಪ ಮತ್ತು ಮೊಹೆಂಜದಾರೊ ಪಟ್ಟಣಗಳ ಸಂಶೋಧನೆಯಲ್ಲಿ ಧ್ಯಾನಕ್ಕೆ ಕುಳಿತ ಸಿದ್ಧಾಸನದಲ್ಲಿರುವ ಯೋಗಿರಾಜನೊಬ್ಬನ ಮುದ್ರಿಕೆ ದೊರೆತಿದೆ. ಅಂದರೆ ಕ್ರಿ.ಪೂ. 2000 – 2500 ವರ್ಷಗಳ ಹಿಂದೆಯೇ ಯೋಗ ಪ್ರಚಲಿತವಾಗಿತ್ತೆಂಬುದಕ್ಕೆ ಇದು ಉತ್ತಮ ಸಾಕ್ಷ್ಯಾಧಾರವಾಗಿದೆ. ಕೆಲವು ಪುರಾತನ ದೇವಾಲಯಗಳ ಶಿಲ್ಪದಲ್ಲಿ ಆಸನಾರೂಢರಾದ ಋಷಿಗಳ ಕೆತ್ತನೆಗಳಿವೆ.

## ವೇದಗಳಲ್ಲಿ ಉಲ್ಲೇಖ :

ಯೋಗದ ಇತಿಹಾಸವನ್ನು ಕ್ರಿ.ಪೂ. 2700–1000ಕ್ಕೆ ಕೊಂಡೊಯ್ಯುತ್ತದೆ ವೇದ. ಯಜುರ್ವೇದದಲ್ಲಿ ಬರುವ ಒಂದು ಮಂತ್ರವು ಹೀಗಿದೆ.

ಉದ್ವಯಂ ತಮಸಸ್ಪರಿ ಸ್ವಃ ಪಶ್ಯಂತರುತ್ತರಂ
ದೇವಂ ದೇವತ್ರ ಸೂರ್ಯ ಮಗನ್ಮ –
ಜ್ಯೋತಿರುತ್ತರಂ । 35–14

ಅಂದರೆ " ನಾವು ಕನಿಷ್ಠಸ್ಥಾನೀಯವಾದ ಅಂಧಕಾರಮಯೀ ಪ್ರಕೃತಿಯಿಂದ ಮೇಲೆದ್ದು ಅದಕ್ಕಿಂತ ಶ್ರೇಷ್ಠವಾದ ಸುಖಪ್ರದವಾದ ಜೀವಾತ್ಮನನ್ನು ಕಂಡುಕೊಳ್ಳುತ್ತಾ ವಿದ್ವಜ್ಜನ ಸಮೂಹದಲ್ಲಿ ಸರ್ವೋತ್ತಮ ಜ್ಯೋತಿಯಾದ ಸರ್ವಜ್ಞ ಸರ್ವಪ್ರದನಾದ ಸಮಸ್ತ ಬ್ರಹ್ಮಾಂಡ ಸಂಚಾಲಕನಾದ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳೋಣ."

ಮುಂದೆ ಯೋಗದ ಪರಿಭಾಷೆಯನ್ನು ನೋಡಿದಾಗ ಈ ಸಾಕ್ಷಾತ್ಕಾರವೇ 'ಯೋಗ'ವೆನ್ನುವುದು ವ್ಯಕ್ತವಾಗುತ್ತದೆ. ಮತ್ತೊಂದು ಋಕ್ಕಿನಲ್ಲಿ,

ಯುಂಜತೇ ಮನ ಉತ ಯುಂಜತೇ ಧಿಯೋ
ವಿಪ್ರಾ ವಿಪ್ರಸ್ಯ ಬೃಹತೋ ವಿಪಶ್ಚಿತಃ।
5–81–8

ಅಂದರೆ ವಿಶೇಷ ಪ್ರಜ್ಞಾವಂತರಾದ ಪಶಿಷ್ಣ, ಪ್ರವೀಣರಾದ ಜ್ಞಾನಿಗಳು ಮಹತ್ವಶಾಲಿಯೂ, ವಿರಾಟ್ ಚೇತನನೂ, ವಿಶ್ವಪ್ರೇರಕನೂ, ಸರ್ವಜ್ಞನೂ ಆದ ಪರಮಾತ್ಮನಲ್ಲಿ ಮನಸ್ಸನ್ನೂ, ಮನನ ಸಾಮರ್ಥ್ಯವನ್ನೂ ನಿಯೋಜಿಸುತ್ತಾರೆ, ನಿಲ್ಲಿಸುತ್ತಾರೆ, ಹೂಡುತ್ತಾರೆ. ಹಾಗೆಯೇ ತಮ್ಮ ಬುದ್ಧಿಗಳನ್ನೂ, ಪ್ರಭುಸಾಕ್ಷಾತ್ಕಾರ ಸತ್ಕರ್ಮಗಳನ್ನೂ ಒಂದುಗೂಡಿಸುತ್ತಾರೆ. ಏಕಾಗ್ರಗೊಳಿಸುತ್ತಾರೆ, ಏಕೀಕರಿಸುತ್ತಾರೆ.

ಒಟ್ಟಿನಲ್ಲಿ ವೇದಗಳ ಪರಮಗುರಿ ಈಶ್ವರಪ್ರಾಪ್ತಿ. ಅಂದರೆ ಮೋಕ್ಷಸಾಧನೆ. ಇದೇ ಯೋಗದ ನಿಜವಾದ ಗುರಿ ಈ ಗುರಿಯು ವೇದದಲ್ಲಿ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಮೊಳಗಿದೆ.

## ಉಪನಿಷತ್ತುಗಳಲ್ಲಿ ಯೋಗ

ಉಪನಿಷತ್ತುಗಳ ಕಾಲಕ್ಕೆ ಕರ್ಮಕಾಂಡವು ಕಳೆದು ಜ್ಞಾನಕಾಂಡದ ಕಡೆಗೆ ಪ್ರಾಪಂಚಿಕ ಒಲವು ಹರಿದಿತ್ತು. ಸುಮಾರು 108 ಉಪನಿಷತ್ತುಗಳು ಬ್ರಹ್ಮವಿದ್ಯೆಯನ್ನು ತಿಳಿಸುತ್ತವೆ. ಇವುಗಳಲ್ಲಿ ಇಪ್ಪತ್ತು ಉಪನಿಷತ್ತುಗಳು ಯೋಗವಿದ್ಯೆಗಾಗಿಯೇ ಮೀಸಲಾಗಿವೆ. ಬ್ರಹ್ಮನನ್ನು ಕಾಣಲು ಅಥವಾ ದೈವತ್ವವನ್ನು ಹೊಂದಲು ಯೋಗ ಹೇಗೆ ಸಹಾಯ ಮಾಡುತ್ತದೆ ಎಂಬುದನ್ನು ಯೋಗೋಪನಿಷತ್ತುಗಳು ತಿಳಿಸುತ್ತವೆ

ಯೋಗವೆಂದರೇನೆಂಬುದನ್ನು ಉಪನಿಷತ್ತು ಹೀಗೆ ಹೇಳುತ್ತದೆ.

" ತಾಂ ಯೋಗಮಿತಿ ಮನ್ಯಂತೇ ಸ್ಥಿರಾಂ ಇಂದ್ರಿಯ ಧಾರಣಾಂ । " ಅಂದರೆ ಇಂದ್ರಿಯ ನಿಗ್ರಹವೇ ಯೋಗ.

" ತದ್ಯೋಗೇನ ಆತ್ಮದರ್ಶನಂ " ಎಂದು ಹೇಳಿದೆ. ಅಂದರೆ ಆದರಿಂದಲೇ ಆತ್ಮದರ್ಶನ.

ಅಮೃತಬಿಂದೂಪನಿಷತ್ತಿನಲ್ಲಿ, " ಬ್ರಹ್ಮವಿತ್ ಬ್ರಹ್ಮೈವ ಭವತಿ " ಎಂದಿದೆ. ಬ್ರಹ್ಮಜ್ಞಾನವನ್ನು ಪಡೆದವನು ಬ್ರಹ್ಮನೇ ಆಗುತ್ತಾನೆ ಎಂಬುದು ಈ ಉಪನಿಷತ್ತಿನ ತಿರುಳು.

ಜೀವಭಾವದಲ್ಲಿದ್ದವನು ಪರಮಭಾವವನ್ನು ಗಳಿಸುವ ಬಗೆ ಹೇಗೆ ಎಂಬುದನ್ನು ಹಂಸೋಪನಿಷತ್ತಿನಲ್ಲಿ ತಿಳಿಸಿದೆ. ಇಲ್ಲಿಯ ಮಂತ್ರಕ್ಕೆ "ಹಂಸಮಂತ್ರ"ವೆಂದು ಹೆಸರು. " ಹಂಸ ಹಂಸಃ ಪರಮ ಹಂಸಸ್ಸೋಽಹಂ ಹಂಸಃ " 'ಹಂಸ' ಎಂದರೆ ಆತ್ಮ. 'ಪರಮ ಹಂಸ' ಎಂದರೆ ಪರಮಾತ್ಮ. ಆತ್ಮನು ತಾನು ಪರಮಾತ್ಮ ಸ್ವರೂಪವಲ್ಲದೆ ಬೇರೆಯಲ್ಲವೆಂಬ ಭಾವವನ್ನು ಕಳೆದು ಪರಮಾತ್ಮನ ಸ್ವರೂಪವೇ ಆಗುತ್ತಾನೆಂಬುದು ಈ ಉಪನಿಷತ್ತಿನ ಮುಖ್ಯಸಾರ.

ಈ ವಿಷಯವನ್ನೇ ಯೋಗತತ್ತ್ವೋಪನಿಷತ್ತಿನಲ್ಲಿ, " ಯೋಗಸ್ಸಮತಾವಸ್ಥಾ ಜೀವಾತ್ಮ ಪರಮಾತ್ಮನೋಃ " ಎಂದು ಹೇಳಿದೆ. ಅಂದರೆ

ಶ್ರೀ ಕೆ. ಕೇಶವಮೂರ್ತಿ

ಜೀವಾತ್ಮನು ಪರಮಾತ್ಮನಲ್ಲಿ ಸಮರಸ ಹೊಂದು ವುದೇ ಯೋಗ

ಇದೇ ಮಾತನ್ನು ಶಾಂಡಿಲ್ಯೋಪನಿಷತ್ತಿನಲ್ಲಿ "ಜೀವಾತ್ಮ ಪರಮಾತ್ಮೈಕ್ಯಾವಸ್ಥಾ ಯೋಗಃ" ಎಂದು ಹೇಳಿದೆ. ಒಟ್ಟಿನಲ್ಲಿ ಜೀವ ಬ್ರಹ್ಮರ ಸಂಯೋಗವೇ ಯೋಗ.

ಯೋಗಚೂಡಾಮಣ್ಯೋಪನಿಷತ್ತಿನಲ್ಲಿ ಯೋಗದ ಯಮನಿಯಮಗಳನ್ನು ಪೀಠಿಕೆಯಸ್ನಾಗಿ ಮಾಡಿ ಯೋಗ ಸಿದ್ಧಿಗೆ ಸಹಕಾರಿಗಳಾದ ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ, ಧ್ಯಾನ ಮತ್ತು ಸಮಾಧಿಗಳಾದ ಈ ಆರು ಅಂಗಗಳನ್ನು ಕ್ರಮವಾಗಿ ವಿವರಿಸಿದೆ. ಅಲ್ಲದೆ ಯೋಗಸಿದ್ಧಿಯನ್ನು ಪಡೆಯಲು ಉಪಯುಕ್ತಗಳಾದ ಷಟ್ಚಕ್ರಗಳ ವರ್ಣನೆಯಿದೆ, ಇಷ್ಟೇ ಅಲ್ಲದೆ ಖೇಚರೀ, ವಜ್ರೋಳೀ ಮತ್ತು ಮಹಾಮುದ್ರಾ ಎಂಬ ಮೂರು ಬಗೆ ಮುದ್ರಾಬಂಧಗಳ ಪ್ರಾಶಸ್ತ್ಯವನ್ನು ಈ ಉಪನಿಷತ್ತು ಒತ್ತಿ ಹೇಳುತ್ತದೆ. ಇದರ ಜತೆಗೆ ಪ್ರಣವಸ್ವರೂಪವನ್ನು ವರ್ಣಿಸಿ ಅದರ ಜಪದ ಮೂಲಕ ತುರೀಯ ಸ್ಥಿತಿಯನ್ನೂ ಆ ಬಳಿಕ ತುರೀಯಾತೀತವೆನಿಸಿದ ಬ್ರಹ್ಮಸ್ವರೂಪವನ್ನೂ ಯೋಗಿಯು ಹೇಗೆ ಪಡೆಯುವನೆಂಬುದನ್ನು ವಿವರಿಸಿ ಯೋಗಸಿದ್ಧಿಯನ್ನು ಪಡೆಯುವುದರ ಪಾತ್ರವೆಂಥದೆಂಬುದನ್ನು ವಿವರಿಸಿ ಮುಕ್ತಾಯ ಮಾಡಿದೆ.

ಇಲ್ಲಿ ನಿರೂಪಿಸಿರುವಂತೆ ಸಾಧಕನು ಅನುಷ್ಠಾನ ಮಾಡಿದ್ದೇ ಆದರೆ ಆತನು ಆತ್ಮಜ್ಞಾನವನ್ನು ಹೊಂದಿ ತನ್ಮೂಲಕ ಬ್ರಹ್ಮಿಷ್ಠನಾಗಬಲ್ಲನೆಂಬುದೇ ಈ ಉಪನಿಷತ್ತಿನ ರಹಸ್ಯ.

ಕಠೋಪನಿಷತ್ತಿನಲ್ಲಿ ಉಪಮಾನ ಉಪಮೇಯಗಳ ಮೂಲಕ ಚಿತ್ತವನ್ನೂ, ಆತ್ಮವನ್ನೂ ವಿವರಿಸಿದೆ,

ಆತ್ಮಾನಂ ರಥಿನಂ ವಿದ್ಧಿ ಶರೀರಂ
ರಥಮೇವತು ।
ಬುದ್ಧಿಂತು ಸಾರಥಿಂ ವಿದ್ಧಿ ಮನಃ
ಪ್ರಗ್ರಹಮೇವಚ ॥
ಇಂದ್ರಿಯಾಣಿ ಹಯಾನ್ಯಾಹುರ್ವಿಷಯಾಂ
ಸ್ತೇಷುಗೋಚರಾನ್ ।
ಆತ್ಮೇಂದ್ರಿಯ ಮನೋಯುಕ್ತಂ
ಭೋಕ್ತೇತ್ಯಾಹುರ್ಮನೀಷಿಣಃ ॥

ಇಲ್ಲಿ ದೇಹವೇ ರಥ: ಜೀವಾತ್ಮನು ಅದರ ಅದರ ಒಡೆಯ, ಬುದ್ಧಿಯೇ ಸಾರಥಿ; ಮನಸ್ಸೇ ಕಡಿವಾಣ; ಇಂದ್ರಿಯಗಳೇ ಕುದುರೆಗಳು; ಅವುಗಳಿಗೆ ಗೋಚರವಾಗುವ ವಿಷಯಗಳೇ ಮಾರ್ಗಗಳು, ಶರೀರೇಂದ್ರಿಯ ಮನಸ್ಸುಗಳಿಂದ ಕೂಡಿದ ಜೀವಾತ್ಮನೇ ಭೋಕ್ತೃವಾದ ಸಂಸಾರಿಯೆಂದು ವಿವೇಕಿಗಳು ಹೇಳುತ್ತಾರೆ. ಇಂದ್ರಿಯಗಳು ತುಂಟಕುದುರೆಗಳಂತಾಗದಿರಲು ಯುಕ್ತ ಮನಸ್ಸಿನ ಜಾಣ್ಮೆಯುಳ್ಳವನಾಗಿರ ಬೇಕು.

ರಾಜಯೋಗ ದೃಷ್ಟಿಯಿಂದ ಈ ಕೆಳಗಿನ ಮಂತ್ರ ಬಹು ಮುಖ್ಯವಾದುದು-

"ಪರಾಂಚಿಖಾನಿವ್ಯತೃಣತ್ಸ್ವಯಂಭೂಃ
ತಸ್ಮಾತ್ಪರಾಙ್ಪಶ್ಯತಿನಾಂತರಾತ್ಮನ್ ।
ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷದಾ
ವೃತ್ತಚಕ್ಷುರಮೃತತ್ವಮಿಚ್ಛನ್ ॥"

ಸ್ವಯಂಭುವಾದ ಪರಮೇಶ್ವರನು ಇಂದ್ರಿಯಗಳನ್ನು ಬಹಿರ್ಮುಖವಾಗಿ ಸೃಷ್ಟಿಸಿದ್ದಾನೆ. ಆದ್ದರಿಂದ ಇವುಗಳ ವ್ಯವಹಾರವೆಲ್ಲ ಹೊರಗಡೆಗೇ. ಜೀವಿ ಸ್ವಭಾವತಃ ಹೊರಮುಖವಾದ ಇಂದ್ರಿಯಗಳ ಮೂಲಕ ಸದಾ ಅವುಗಳಿಗೆ ಗೋಚರವಾಗುವ ಇಂದ್ರಿಯ ವಿಷಯಗಳ ಕಡೆಗೆ ಸೆಳೆಯಲ್ಪಟ್ಟು ಒಳಗಿರುವ ಆತ್ಮನನ್ನು ನೋಡಲಾರನು. ಆದರೆ ಯಾವನೋ ಒಬ್ಬ ಧೀರ ಎಂದರೆ ಆತ್ಮಜ್ಞಾನ ಸಂಪನ್ನ– ಕವಿ, ಕಣ್ಣು ಮುಂತಾದ ಇಂದ್ರಿಯಗಳನ್ನು ಅಂತರ್ಮುಖಗೊಳಿಸಿ ಹೃದಯಾಕಾಶದಲ್ಲಿರುವ ಪರಂಜ್ಯೋತಿಯಾದ ಪರಮಾತ್ಮನ ದರ್ಶನ ಮಾಡುವನು. ಅಮೃತವನ್ನು ಹೊಂದಬೇಕೆಂಬ ಕಟುವಾದ ಇಚ್ಛೆಯೇ ಜೀವರ ಈ ಅಂತರ್ಮುಖತ್ವಕ್ಕೆ ಪ್ರಬಲ ಪ್ರೇರಕ. ಒಳಗಣ್ಣು ತೆರೆದರೆ ದಿವ್ಯಸೌಂದರ್ಯ ದರ್ಶನವಾಗಿ ಪರಮಾನಂದಾನುಭವವಾಗುತ್ತದೆ.

ಮುಂಡಕೋಪನಿಷತ್ತಿನಲ್ಲಿ, "ಬ್ರಹ್ಮವೇದ ಬ್ರಹ್ಮೈವ ಭವತಿ" ಎಂದು ಹೇಳಿದೆ. ಅಂದರೆ

( 28ನೇ ಪುಟ ನೋಡಿ )

( 16ನೇ ಪುಟದಿಂದ )

ಯುದ್ಧ ಮೂಲದ ನೇರವಾದ ಭಾಷಾಂತರವಲ್ಲ. ವಸ್ತುವನ್ನು ಮೂಲದಿಂದ ತೆಗೆದುಕೊಂಡಿದ್ದರೂ ಮೂಲದಲ್ಲಿದ ಅನೇಕ ಸೊಗಸಾದ ವರ್ಣನೆಗಳನ್ನು ನಾಟಕೀಯ ಸನ್ನಿವೇಶಗಳನ್ನು ಕಾವ್ಯದಲ್ಲಿ ತುಂಬಿದ್ದಾನೆ. ಮಣಿಪುರದವರ್ಣನೆ, ಅರ್ಜುನ ಬಭ್ರುವಾಹನರ ಸಂಭಾಷಣೆ–ಇವು ಬಹು ಶಕ್ತಿಯುಕ್ತವಾಗಿವೆ 'ಜಯದ್ರಥನವಧೆ'ಯು ಈತನ ಮತ್ತೊಂದು ಕೃತಿ.

೧೫ ನೆಯ ಶತಮಾನದಲ್ಲಿ ವೈಷ್ಣವ ಪಂಥೀಯರಲ್ಲಿ ಪ್ರಖ್ಯಾತ ವ್ಯಕ್ತಿಯಾದ ಮಾಧವದೇವನು ಭಾರತಕ್ಕೆ ಸಂಬಂಧಪಟ್ಟಂತೆ 'ರಾಜಸೂಯ ಯಜ್ಞ' ವೆಂಬ ಕಾವ್ಯವನ್ನೂ 'ಅರ್ಜುನ ಭಂಜನ' ಎಂಬ ನಾಟಕವನ್ನು ರಚಿಸಿದ್ದಾನೆ

ವೈಷ್ಣವ ಪಂಥೀಯರಲ್ಲಿ ಸರ್ವತೋಮುಖವಾದ ಶಕ್ತಿಯಿಂದ ಕೂಡಿದವನೆಂದರೆ ರಾಮಸರಸ್ವತಿ. ಕುಚ್ ಬಿಹಾರಿನ ರಾಜನಾದ ನರನಾರಾಯಣನು ಸಂಸ್ಕೃತ ಮಹಾಭಾರತವನ್ನು ಭಾಷಾಂತರಿಸುವಂತೆ ಇವನಿಗೆ ಅಜ್ಞೆಮಾಡಿ ಅದಕ್ಕೆ ಬೇಕಾದ ಒಂದು ಗಾಡಿಯಷ್ಟು ಮೂಲ ಪ್ರತಿಗಳನ್ನು ಒದಗಿಸಿ ಕೊಟ್ಟನು ಅನೇಕ ಸಮಕಾಲೀನ ಕವಿಗಳು ಇವನಿಗೆ ಈ ಕಾರ್ಯದಲ್ಲಿ ನೆರವಾದರು. ಆತನೇ ಆದಿ, ವನ, ವಿರಾಟ, ಭೀಷ್ಮಪರ್ವಗಳನ್ನು ಭಾಷಾಂತರಿಸಿದನು. ಮೂಲದ ದೀರ್ಘವಾದ ವರ್ಣನೆಗಳ ಜೊತೆಗೆ ಅವನು ಪುರಾಣಗಳ ಅನೇಕ ಉಪಾಖ್ಯಾನಗಳನ್ನೂ ಸೇರಿಸಿದ್ದಾನೆ. ಭಾರತದ ಭಾಷಾಂತರ ಕಾರ್ಯದಲ್ಲಿ ರಾಮಸರಸ್ವತಿಗೆ ಸಹಾಯ ಮಾಡಿದವರು ಹಲವರಿದ್ದಾರೆ. ಅವರಲ್ಲಿ ವಿದ್ಯಾಪಂಚಾನನ, ಗೋಪೀನಾಥ, ದಾಮೋದರ, ಕಂಸಾರಿ ಕಾಯಸ್ಥ, ಶ್ರೀಮಂತ ನಭರುಖಾ, ದಾಮೋದರದಾಸ್, ಜಯನಾರಾಯಣ, ಲಕ್ಷ್ಮಿನಾಥದ್ವಿಜ, ಗಂಗಾದಾಸ್, ಸುಬುದ್ಧ ರಾಯ್ ಮತ್ತು ಭವಾನೀದಾಸರನ್ನೂ ಹೆಸರಿಸಬಹುದು. ಇವನ ಮತ್ತೊಂದು ಜನಪ್ರಿಯ ಗ್ರಂಥ 'ಭೀಮ ಚರಿತ' ಇದರಲ್ಲಿ ಬರುವ ಭೀಮಪಾತ್ರವು ಬಹು ಆಕರ್ಷಕವಾಗಿದೆ. ಇದರಲ್ಲಿ ರೈತನ ಸರಳ ಜೀವನ ಬಹು ಹೃದಯಂಗಮವಾಗಿ ಚಿತ್ರಿತವಾಗಿದೆ. ಇವನ ಕೃತಿಗಳಿಂದ ಪ್ರಾಚೀನ ಗ್ರಂಥ ಭಂಡಾರವು ಸಾಮಾನ್ಯರ ಕೈವಶವಾಯಿತು. ಇವುಗಳ ಆಧಾರದಮೇಲೆ ಮುಂದಿನವರು ತಮ್ಮ ಅನೇಕ ಕೃತಿಗಳನ್ನು ರಚಿಸಿದ್ದಾರೆ. ಪ್ರಾಚೀನ ಪುರಾಣೇತಿಹಾಸಗಳ ಆಧಾರದಮೇಲೆ ರಾಮಸರಸ್ವತಿಯು ಅನೇಕ 'ಪದ' ಕಾವ್ಯಗಳನ್ನು ರಚಿಸಿದ್ದಾನೆ. ಅವುಗಳಲ್ಲಿ ಭಾರತಕ್ಕೆ ಸಂಬಂಧಪಟ್ಟ 'ಬಕಾಸುರವಧೆ' ಬಹು ವೀರ್ಯವತ್ತಾಗಿದೆ.

ಆಧುನಿಕ ಅಸ್ಸಾಮಿಯ ಸಾಹಿತ್ಯದಲ್ಲಿ ಭರತ ಚಂದ್ರನ 'ಅಭಿಮನ್ಯುವಧೆ' ವೇಣೀಮಾಧವ ರಾಜಖೋವನ 'ದುರ್ಯೋಧನನ ಊರುಭಂಗ' ದುರ್ಗಾಪ್ರಸಾದ್ ಮಜುಂದಾರನ 'ವೃಷಕೇತು' ಇವು ಭಾರತ ಸಂಬಂಧವಾದ ನಾಟಕಗಳು.

ಮಹಾರಾಷ್ಟ್ರದ ಸಾಧುಸಂತರೆಲ್ಲ ಪಂಡರಾಪುರದ ವಿಠೋಬನ ಭಕ್ತರು. 'ಭಗವದ್ಗೀತೆ' ಮತ್ತು ಭಾಗವತಗಳು ಅವರಿಗೆ ಪರಮ ಪವಿತ್ರವಾದ ಗ್ರಂಥಗಳು ಆದುದರಿಂದ ೧೨ನೆಯ ಶತಮಾನದವರೆಗೆ ಭಾರತ ಸಂಬಂಧವಾದ ಕೃತಿಗಳಾವುವೂ ರಚಿತವಾಗಿರುವಂತೆ ಕಾಣುವುದಿಲ್ಲ ಆ ಶತಮಾನದ ಪೂರ್ವಾರ್ಧದಲ್ಲಿ ಮುಕ್ತೇಶ್ವರನು ತನ್ನದೇ ಆದ ಆಕರ್ಷಕ ಶೈಲಿಯಲ್ಲಿ ೧೮ ಪರ್ವಗಳ ಭಾರತವನ್ನು ಸಂಪೂರ್ಣವಾಗಿ ರಚಿಸಿರುವಂತೆ ಪ್ರತೀತಿ ಇದೆ, ಈಗ ಉಪಲಬ್ಧವಾಗಿರುವುದು ನಾಲ್ಕು ಪರ್ವಗಳು ಮಾತ್ರ. ಇತ್ತೀಚೆಗೆ ಸೌಪ್ತಿಕ ಮತ್ತು ಶಾಂತಿ ಪರ್ವಗಳೂ ಸಿಕ್ಕಿವೆ. ಉಳಿದುವೇನಾಯಿತೆಂಬುದು ತೊಡಕಾಗಿಯೇ ಇದೆ ಸಿಕ್ಕಿರುವುಗಳಲ್ಲಿ ಆದಿಪರ್ವವು ಸರ್ವೋತ್ತಮವಾಗಿದೆ. ಕವಿಯ ವ್ಯಕ್ತಿವೈಶಿಷ್ಟ್ಯವೆಲ್ಲ ಇಲ್ಲಿ ಪ್ರತಿಪಾದಿತವಾಗಿದೆ ಆತನ ವಿಸ್ತಾರವಾದ ವರ್ಣನಾವೈಭವ, ವಿವಿಧ ರಸಗಳ ಪ್ರತಿಪಾದನೆ. ಸರಳವೂ ಮಧುರವೂ ಶಕ್ತಿ ಯುಕ್ತವೂ ಆದ ಶೈಲಿ ಮೊದಲಾದುವುಗಳನ್ನು ಅಲ್ಲಿ ಕಾಣಬಹುದು. ೧೭ ನೆಯ ಶತಮಾನಾಂತ್ಯದಲ್ಲಿ ಪಂಡರಾಪುರದ ಶ್ರೀಧರನು 'ಪಾಂಡವ ಪ್ರತಾಪವಿಜಯ' ವೆಂಬ ಗ್ರಂಥವನ್ನು ರಚಿಸಿದನು. ಇವನ ಇತರ ಗ್ರಂಥಗಳಾದ 'ಹರಿವಿಜಯ' ಮತ್ತು 'ರಾಮವಿಜಯ' ಗಳು–ಇವು ಮೂರು ಇವನಿಗೆ ವಿಶೇಷ ಖ್ಯಾತಿಯನ್ನು ತಂದಿವೆ ಶೈಲಿಯಲ್ಲಿ ಸರಳತೆ, ಛಂದಸ್ಸಿನಲ್ಲಿ ಓಟ, ಋಜುವಾದ ಕಥನಕ್ರಮ ಇವುಗಳಿಂದ ಇವು ಮೂರು ಮೂಲದಷ್ಟೇ ಆಕರ್ಷಕವಾಗಿ ಮರಾಠಿ ಸಾಹಿತ್ಯದಲ್ಲಿ ಉಚ್ಚಸ್ಥಾನವನ್ನು ಪಡೆದಿವೆ.

ಮರಾಠಿಯಲ್ಲಿ ಪ್ರಥಮ ಸಂಪೂರ್ಣ ಭಾರತ ಪುರಾಣವನ್ನು ರಚಿಸಿದವನು ಮೋರೋಪಂತ್. ಬ್ರಾಹ್ಮಣ; ಕೊಲ್ಹಾಪುರದ ಹತ್ತಿರವಿರುವ ಪನ್ಹಾಲ ಎಂಬ ಗ್ರಾಮದಲ್ಲಿ ೧೭೨೯ ರಲ್ಲಿ ಜನಿಸಿದನು ಪಂಡಿತ, ವಾಚಾಳಿ, ಪೌರಾಣಿಕ, ತನ್ನ ಜೀವನದ ಪೂರ್ವಾರ್ಧದಲ್ಲಿ ರಾಮಾಯಣ ಮತ್ತು ಭಾಗವತದ ಆಧಾರದ ಮೇಲೆ 'ಕೃಷ್ಣವಿಜಯ' 'ಮಂತ್ರ ಭಾಗವತ' ಎಂಬ ಗ್ರಂಥಗಳನ್ನು ರಚಿಸಿದನು ಅಪರ ವಯಸ್ಸಿನಲ್ಲಿ ಹತ್ತು ವರ್ಷ ಶ್ರಮಿಸಿ ತನ್ನ ಕೃತಿ ರತ್ನವಾದ ಮರಾಠಿ ಭಾರತವನ್ನು ರಚಿಸಿದನು. ಕವಿಯ ಶಕ್ತಿ ಸರ್ವಸ್ವವೂ ಇಲ್ಲಿ ಪ್ರದರ್ಶಿತವಾಗಿದೆ. ಆರ್ಯಾವೃತ್ತದಲ್ಲಿ ಪಾಂಡಿತ್ಯ, ಅನುಭವ ವೈವಿಧ್ಯ, ಭಾಷಾ ಚಾಕಚಕ್ಯ, ದೀರ್ಘವರ್ಣನೆಗಳ ವೈಖರಿ ರಸಪ್ರತಿಪಾದನಾ ಶಕ್ತಿ, ಮೈಝುಮ್ಮೆನಿಸುವ ಕಥನ ರೀತಿ, ಶಕ್ತಿಯುಕ್ತವಾದ ಸಂಭಾಷಣಾ ಕೌಶಲ್ಯ, ನಾಟಕೀಯತೆ ಮೊದಲಾದ ಮಹಾಕವಿ ಸಹಜವಾದ ಎಲ್ಲ ಕಾವ್ಯಗುಣಗಳನ್ನು ಇಲ್ಲಿ ಕಾಣಬಹುದು.

೧೬ ನೆಯ ಶತಮಾನದಲ್ಲಿ ಕವೀಂದ್ರನು ಮಹಾಭಾರತವನ್ನೂ ಶ್ರೀಕರನ್ ನಂದ್ವಿಯು ಮಹಾಭಾರತದ ಅಶ್ವಮೇಧ ಪರ್ವದ ಭಾಗವನ್ನು ವಂಗ

ಷಾಷೆಗೆ ಭಾಷಾಂತರಿಸಿದರು. ಕವೀಂದ್ರನ ಭಾರತವೇ ಮೊದಲನೆಯ ವಂಗಭಾರತ. ಆತನ ಹೆಸರು ಪರಮೇಶ್ವರನೆಂದೂ ಕವೀಂದ್ರನೆಂಬುದು ಬಿರುದೆಂದೂ ಊಹಿಸಲ್ಪಟ್ಟಿದೆ.

ಮುಂದು ವಂಗ ಭಾಷೆಯಲ್ಲಿ ಮಹಾಭಾರತದ ಸುಮಾರು ಮೂವತ್ತು ಭಾಷಾಂತರಗಳಿವೆ ಇವುಗಳಲ್ಲಿ ಕಾಶೀರಾಮದಾಸ್', ನಿತ್ಯಾನಂದ ಘೋಷ್, ರವಿಚಂದ್ರ ಚಕ್ರವರ್ತಿ, ಇವರವು ಉತ್ತಮವಾದವು. ಇವುಗಳಲ್ಲಿಯೂ ಕಾಶಿರಾಮನ ಭಾರತವು ಪರಮೋತ್ತಮವಾಗಿ ಆ ಭಾಷೆಯಲ್ಲಿಯೇ ರಚಿತವಾಗಿರುವ ಕೃತ್ತಿವಾಸನ ರಾಮಾಯಣದಷ್ಟೇ ಜನಪ್ರಿಯವಾಗಿದೆ. ಇದೂ ನೇರವಾದ ಮೂಲದ ಅನುವಾದವಲ್ಲ ಸ್ವತಂತ್ರ ಕೃತಿಯೆಂದೇ ಹೇಳಬಹುದು ಕವಿಯು ಸಿಂಗಿ ಎಂಬ ಗ್ರಾಮದವನು. ೧೭ ನೆಯ ಶತಮಾನದ ಮೊದಲನೆಯ ಪಾದದಲ್ಲಿ ಭಾರತವನ್ನೂ ರಚಿಸಿರಬೇಕು. ಗ್ರಂಥವು ಪೂರ್ಣವಾಗುವವರೆಗೆ ಕವಿಯು ಜೀವಿಸಿರಲಿಲ್ಲವಾಗಿ ಕೊನೆಯ ಭಾಗವನ್ನು ಅವನ ಮಗನು ರಚಿಸಿದನೆಂಬ ಅಭಿಪ್ರಾಯವು ಸರಿಯಲ್ಲ. ಗ್ರಂಥದಲ್ಲಿ ಅವನ ಮಗನ ಕೈವಾಡವಿದ್ದಿರಬಹುದೆಂದು ಒಪ್ಪಿದರೂ ಗ್ರಂಥದ ಪ್ರಾಶಸ್ತ್ಯಕ್ಕೆ ಕುಂದೇನೂ ಇಲ್ಲ.

ಮೈಥಿಲೀ ಭಾಷೆಯಲ್ಲಿ ಆದಿ ಕಾಲದಿಂದ ಭಾರತಕ್ಕೆ ಸಂಬಂಧಪಟ್ಟ ಗ್ರಂಥಗಳು ರಚಿತವಾಗಿವೆ. ಅಚ್ಯುತಾನಂದ ದತ್ತನ 'ಮಹಾಭಾರತ' ಪ್ರಾಚೀನತಮವಾದುದು. ಇದೇ ಮಾರ್ಗದಲ್ಲಿ ಮುಂದೆ ರಘುನಂದನದಾಸನು 'ಸುಭದ್ರಾಹರಣ'ವನ್ನು ತಂತ್ರನಾಥರೂ 'ಕೀಚಕವಧೆ'ಯನ್ನು ರಚಿಸಿದ್ದಾರೆ.

ಸಿಂಧೀ ಭಾಷೆಯಲ್ಲಿ ೧೧೦೦ ವರ್ಷಕ್ಕೆ ಹಿಂದೆಯೇ ಮಹಾಭಾರತ ಕಥೆಯ ಒಂದು ರೂಪ ಗದ್ಯದಲ್ಲಿ ರಚಿತವಾಗಿತ್ತು. ಮುಂದೆ ಇದು ಅರಬ್ಬೀ ಭಾಷೆಗೆ ಭಾಷಾಂತರವಾಯಿತು ಇದರ ಮೂರು ಭಾಗಗಳಲ್ಲಿ ಮಹಾಭಾರತದ ವೀರರ ಸಂಪರ್ಕವಾಗುವುದಕ್ಕಿಂತ ಹಿಂದಿನ ಸಿಂಧಿಯ ಚರಿತ್ರೆ 'ಭಾರತ'ದ ಸಂಗ್ರಹವಾದ ಕಥೆ, ಮತ್ತು ಪಾಂಡವರಕಾಲದ ರಾಜರುಗಳು ಮತ್ತು ಘಟನೆಗಳು ಇವು ಕ್ರಮವಾಗಿ ವರ್ಣಿತವಾಗಿವೆ.

೧೯ ನೆಯ ಶತಮಾನದ ಉತ್ತರಾರ್ಧದಲ್ಲಿ ಪರಮಾನಂದನು ಕಾಶ್ಮೀರೀ ಭಾಷೆಯಲ್ಲಿ 'ನಳದಮಯಂತಿ ಕಥೆ'ಯನ್ನು ಕುರಿತು ನಿಡುಗವಿತೆಯೊಂದನ್ನು ರಚಿಸಿದ್ದಾನೆ.

ಗುಜರಾತಿ ಭಾಷೆಯಲ್ಲಿಯೂ ೧೭ ನೆಯ ಶತಮಾನದವರೆಗೆ 'ಭಾರತ'ಸಂಬಂಧವಾದ ಕೃತಿಗಳ ರಚನೆಯಿಲ್ಲ, ಆ ಶತಮಾನದಲ್ಲಿ ಪೌರಾಣಿಕನಾದ ಪ್ರೇಮಾನಂದನು ಅನೇಕ ಗ್ರಂಥಗಳನ್ನು ರಚಿಸಿ ಪ್ರಾಚೀನ ಸಂಪ್ರದಾಯಗಳನ್ನು ಜೀವಂತವಾಗಿ ಉಳಿಸಿದನು. ಕಳೆದ ೫೦ ವರ್ಷಗಳವರೆಗೆ ಗುಜರಾತಿನ ಶ್ರೀಮಂತ ಸ್ತ್ರೀವೃಂದದಲ್ಲಿ ಅವನ ಯಾವುದಾದರೊಂದು ಗ್ರಂಥವು ಕಂಠಪಾಠವಾಗುತ್ತಲಿತ್ತು. ಇವನು ಸಂಪೂರ್ಣಭಾರತವನ್ನು ಗುಜರಾತಿ ಭಾಷೆಗೆ ಭಾಷಾಂತರಿಸಿದುದಲ್ಲದೆ ಭಾರತಕ್ಕೆ ಸಂಬಂಧಪಟ್ಟಂತೆ "ಚಂದ್ರಹಾಸಾಖ್ಯಾನ' 'ಋಷ್ಯಶೃಂಗಾಖ್ಯಾನ' 'ದ್ರೌಪದೀಸ್ವಯಂವರ,' 'ಭಗವದ್ಗೀತೆ' 'ನಳೋಪಖ್ಯಾನ' 'ದ್ರೌಪದೀಹರಣ', 'ಅಷ್ಟಾವಕ್ರಗೀತೆ' ಎಂಬ ಗ್ರಂಥಗಳನ್ನೂ ಗುಜರಾತಿ ಭಾಷೆಯಲ್ಲಿ ರಚಿಸಿದ್ದಾನೆ.

ಹಿಂದಿ ಭಾಷೆಯಲ್ಲಿ ಮಹಾಭಾರತಕ್ಕೆ ಸಂಬಂಧಪಟ್ಟ ಹಾಗೆ ಯಾವ ಪ್ರಸಿದ್ಧ ಗ್ರಂಥಗಳಲ್ಲಿದಿರುವುದು ಸೋಜಿಗವಾಗಿದೆ. ಉರ್ದು ಮತ್ತು ಪಂಜಾಬಿ ಭಾಷೆಗಳು ಭಿನ್ನ ಸಂಸ್ಕೃತಿಗಳಿಗೆ ಸಂಬಂಧಪಟ್ಟಿರುವುದರಿಂದ ಆ ಭಾಷೆಗಳಲ್ಲಿ ಮಹಾಭಾರತಕ್ಕೆ ಸಂಬಂಧಪಟ್ಟ ಗ್ರಂಥಗಳಿಲ್ಲ.

ಒಟ್ಟಿನಲ್ಲಿ ಮಹಾಭಾರತವು ಭಾರತೀಯ ಸಂಸ್ಕೃತಿಯನ್ನು ರೂಪಿಸುವುದರಲ್ಲಿ ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಬಹುಮಟ್ಟಿಗೆ ಕಾರಣವಾಗಿವೆ. ಇದರ ಪ್ರಭಾವವು ಇತರ ದೇಶಗಳ ಮೇಲೂ ಇಲ್ಲದೇ ಇಲ್ಲ. ಮುಂದೆಯೂ ಅದು ಪ್ರಪಂಚದ ವಿಶ್ವಸಾಹಿತ್ಯದ ಮಧ್ಯೆ ಗಣ್ಯಸ್ಥಾನವನ್ನಾಕ್ರಮಿಸಿ ಆಚಂದ್ರಾರ್ಕವಾದ ಮಹಾಲ್ಯವನ್ನು ಪಡೆಯುವುದರಲ್ಲಿ ಸಂದೇಹವಿಲ್ಲ.

---

( 26ನೇ ಪುಟದಿಂದ )

ಬ್ರಹ್ಮನನ್ನು ತಿಳಿದವನು ತಾನು ಬ್ರಹ್ಮನೇ ಆಗುತ್ತಾನೆ.

ತೈತ್ತರೀಯೋಪನಿಷತ್ತಿನಲ್ಲಿ, "ಬ್ರಹ್ಮವಿದಾಪ್ನೋತಿ ಪರಂ" ಎಂದು ಹೇಳಿದೆ.

ಅಂದರೆ ಬ್ರಹ್ಮನನ್ನು ತಿಳಿದವನು ಪರಮಪುರುಷಾರ್ಥವನ್ನು ಹೊಂದುತ್ತಾನೆ.

ಛಾಂದೋಗ್ಯೋಪನಿಷತ್ತಿನಲ್ಲಿ "ತರತಿ ಶೋಕಮಾತ್ಮವಿತ್" ಎಂದಿದೆ. ಅಂದರೆ ಆತ್ಮನನ್ನು ತಿಳಿದುಕೊಂಡರೆ ಶೋಕವನ್ನು ದಾಟುತ್ತಾನೆ.

ಮುಮುಕ್ಷುವಿಗೆ ಯೋಗ ಮತ್ತು ಜ್ಞಾನ ಎರಡೂ ಮುಖ್ಯವೆಂಬುದನ್ನು ಯೋಗೋಪನಿಷತ್ತು ಹೀಗೆ ಹೇಳಿದೆ.

"ಯೋಗ ಹೀನೋ ವಿನಾಜ್ಞಾನಂ
ಜ್ಞಾನ ಹೀನಸ್ತು ಯೋಗಿನಃ ।
ತಸ್ಮಾತ್ ಜ್ಞಾನಂಚ ಯೋಗಂಚ
ಮುಮುಕ್ಷುಃ ದೃಢಮಭ್ಯಸೇತ್' ॥"

ಆದ್ದರಿಂದ ಯೋಗಿಯಾದವನು ಜ್ಞಾನಿಯೂ ಆಗಬೇಕು.

ಹೀಗೆ ನಮ್ಮ ಪ್ರಾಚೀನ ಉಪನಿಷತ್ತುಗಳು ಯೋಗ ಮತ್ತು ಅದರ ಸಿದ್ಧಿಯ ಬಗ್ಗೆ ಮುಕ್ತಕಂಠದಿಂದ ಹೇಳಿವೆ. "ಏಕಂ ಸದ್ವಿಪ್ರಾ ಬಹುಧಾವದಂತಿ" ಎಂಬಂತೆ ಈ ಎಲ್ಲ ಉಪನಿಷತ್ತುಗಳ ಸಾರಸರ್ವಸ್ವವೂ ಬ್ರಹ್ಮನನ್ನು ಕಾಣುವುದೇ ಆಗಿದೆ, ಅದೇ ಯೋಗದ ಪರಮಗಂತವ್ಯ.

---

( 11 ನೇ ಪುಟದಿಂದ )

ದಾಸರು ಅವರ ಸಾಹಿತ್ಯ ಸಾಗರದಲ್ಲಿಯೂ ಸಮರ್ಪಣಾಭಾವದ ನುಡಿ ಮುತ್ತುಗಳ ಬೆಳಕು ತ್ರಿಕಾಲಗಳಲ್ಲಿಯೂ ಕವಿದಿರುವ ಕತ್ತಲನ್ನು ಹೊಡೆದೋಡಿಸಲು ಸಾಕಷ್ಟು ಪರಿಣಾಮಕಾರಿಯಾಗಿ ಕೆಲಸ ಮಾಡುತ್ತ ಬಂದಿದೆ ಅಂತಹ ಶಕ್ತಿಯುತ್ತವಾದ ಕೆಲವು ಮಾತುಗಳನ್ನು ಇಂದಿಗೂ ಮೈಗೂಡಿಸಿಕೊಳ್ಳಬಹುದಾಗಿದೆ

"ಏನು ಸುಖವೋ ಎಂಥಾ ಸುಖವೊ ॥ ಪ ॥
ಹರಿಯ ಧ್ಯಾನ ಮಾಡುವರ ಸಂಗ ಏನು
ಸುಖವೊ ॥ ಅ ಪ ॥

ನಡೆವೋದು ನುಡಿವೋದು ನಿರುತ
ಕೊಡುವೋದು ಕೊಂಬೋದು ಜಗ–
ದೊಡೆಯನ ಪ್ರೇರಣೆಯೆಂದು
ನುಡಿದು ಹಿಗ್ಗುವರ ಸಂಗ"

–ಇಂತಹ ಮಾತುಗಳಲ್ಲಿ ಮನುಷ್ಯನ ಚಿತ್ತ ಎಂತಹ ಸಂಸ್ಕಾರಗಳನ್ನು ಪಡೆಯಬೇಕೆಂಬುದಕ್ಕೆ ತುಂಬ ಪರಿಣಾಮಕಾರಿಯಾದ ನಿರ್ದೇಶನ ಇದೆ. ಆ ಮೂಲಕ ನಿಶ್ಚಿಂತ ಜೀವನಕ್ಕೆ, ಫಲಪ್ರದ ಸಂಸಾರಯೋಗಕ್ಕೆ ಯೋಗ್ಯ ತರಬೇತಿಯೂ ದೊರೆಯುತ್ತದೆ. ವಿಶೇಷವಾಗಿ ಇಂತಹ ಸಂದರ್ಭಗಳಲ್ಲೆಲ್ಲ ದಾಸಾರ್ಯರು ಸಮರ್ಪಣಾಭಾವವನ್ನು ಪೌರುಷವಾದದ ತಳಹದಿಯನ್ನಾಗಿ ಮಾಡಿಕೊಂಡು ಪೂರ್ಣಪ್ರಜ್ಞನನ್ನು ಅರಿಯಲು ಸಾಧ್ಯಮಾಡಿ ಕೊಂಡಿದ್ದಾರೆ. ಪ್ರಪಂಚದಲ್ಲಿ ಅವರು ಅಜಾತಶತ್ರುಗಳಾಗಿ ಜೀವನ ಸಾಗಿದ್ದಾರೆ. ಸಾಮಾನ್ಯರನ್ನು ಆ ಮಟ್ಟಕ್ಕೆ ತರಲು ಹಗಲು ರಾತ್ರಿ ಪ್ರಯತ್ನಿಸಿದ್ದಾರೆ. ಅಂತಹವರಲ್ಲಿ ಜಗನ್ನಾಥ ದಾಸರೂ ಒಬ್ಬರು

ಜಗನ್ನಾಥದಾಸರು ಜಾತ್ಯಾಪಂಡಿತರಾಗಿದ್ದರೂ, ದಾಸರ ಮಹಿಮೆಯಿಂದ ಪರಿವರ್ತನೆಯಾಗಿ ಅವರೂ ದಾಸರಾದರು. ಹೀಗಾಗಿ ಅವರ ಸಾಹಿತ್ಯದಲ್ಲಿ ಸಮರ್ಪಣಾಭಾವವನ್ನು ವಿವರಿಸುವ ಅರ್ಥಾತ್ ಚಿತ್ರಿಸುವ ಸಂದರ್ಭದಲ್ಲಿ ಪಾಂಡಿತ್ಯದ ಗಾಂಭೀರ್ಯ, ಔನ್ನತ್ಯ ತಿರುಳುಕನ್ನಡದ ಬನಿ, ಸೊಗಡುಗಳು ಹಾಸುಹೊಕ್ಕಾಗಿ ಬರುತ್ತವೆ. ಹೀಗಾಗಿ ಆ ಎಲ್ಲ ಮಾತುಗಳು ಸೂತ್ರರೂಪದಲ್ಲಿ ಬಂದು ಸಾಮಾನ್ಯನ ಜೀವನಕ್ಕೆ ಸ್ಫೂರ್ತಿ ನೀಡುತ್ತವೆ ಆ ಸೊಗಸಿನ ಸವಿಯನ್ನು ಮನದಟ್ಟು ಮಾಡಿಕೊಳ್ಳಲು ಕೆಲವು ಪಾದಗಳನ್ನು ನೋಡುವುದು ಇಲ್ಲಿ ಯೋಗ್ಯವಾಗಿದೆ. ಜಗನ್ನಾಥ ದಾಸರ ಪದಪದ್ಯಗಳಲ್ಲಿಯ ಕೆಲವು ಪಾದಗಳು ಇಂತಿವೆ,

"ಉಂಡು ಉಟ್ಟದ್ದೆಲ್ಲ ರಂಗನ ಸೇವೆಯೆನ್ನಿ
ಕಂಡ
ಕಂಡದ್ದು ಹರಿಪ್ರೀತಿಯೆನ್ನಿ । ಹರಿಪ್ರೀತಿಯೆನ್ನಿ
ಮೂರ್ಲೋಕಕ್ಕೆ
ಪಾಂಡವ ಪ್ರಿಯನೇ ದೊರೆಯೆನ್ನಿ"

* *

"ತಿಳಿಸಿ ಕೊಂಬುವ ನೀನೆ ಶ್ರುತಿ ಸ್ಮೃತಿ
ಗಳೊಳಗಿದ್ದು
ತಿಳಿಸುವ ನೀನೆ ಉಪದೇಶಕರೊಳು
ತಿಳಿಯುವನು ನೀನೆ ಬುದ್ಧ್ಯಾದಿ
ಇಂದ್ರಿಯಗಳೊಳು
ನೆಲೆಗೊಂಡು ನಿಖಿಲ ವ್ಯಾಪಾರ
ಮಾಡುತಲಿಪ್ಪ ॥"

*

–ಹೀಗೆ ಇಂತಹ ಮಾತುಗಳು ಜೀವನ ಸ್ಫುರಣಕ್ಕೆ ಅವಕಾಶ ಮಾಡಿಕೊಡುತ್ತವೆ. ಇದನ್ನೇ ಸಾಹಿತ್ಯ ಸಂಜೀವಿನಿಯೆಂದು ಕರೆದರೆ ತಪ್ಪಿಲ್ಲ. ಇದೇ ಕ್ರಮದಲ್ಲಿ ಪ್ರಸನ್ನ ವೆಂಕಟದಾಸರ ಕೆಳಗಿನ ಹಾಡುಗಳನ್ನು ಈ ಸಂದರ್ಭದಲ್ಲಿ ನೆನೆಯಬಹುದು;

"ತಂದೆ ತಾಯಿ ಪುತ್ರ ನೀನೆ
ಬಾಂಧವ ನೀನೆ ನಿ।
ನ್ನಿಂದ ಬಳಿಕಿಲ್ಲೆನಗೆ ಇಂದಿರಾಧವನೇ
ಕಾಯೋ"

ಅದೇ ರೀತಿ ಮಹೀಪತಿದಾಸರ ಹಾಡುಗಳಲ್ಲಿಯೂ ಇಂತಹ ಇಂತಹ ಭಾವಸ್ಫುರಣವನ್ನು ಸಾಕಷ್ಟು ಕಾಣಬಹುದಾಗಿದೆ. ಉದಾಹರಣೆಗೆಂದು ಕೆಳಗಿನ ಕೆಲವು ಸಾಲುಗಳನ್ನು ನೋಡಬಹುದಾಗಿದೆ.

"ಸಕಲವೆನಗೆ ನೀನೆ ಶ್ರೀಹರಿಯೆ
ತಂದೆ ತಾಯಿ ಸ್ವಹಿತಾತ್ಮನು ನೀನೆ
... ... ... ... ... ... .
... ... ... . ... ... ..
ಮಹಿಪತಿ ಮನೋಮೂರ್ತಿಯು ನೀನೆ
ಸಾಹ್ಯ ಸಕಲಕೆ ಸಾರ್ಥಿಯು ನೀನೆ॥"

ಎಂಬಂತಹ ಮಾತುಗಳಲ್ಲಿ ಸಮರ್ಪಣಾಭಕ್ತಿಯ ಸತ್ತ್ವದ ಕಣಕವು ಅಭಿವ್ಯಕ್ತಗೊಂಡಿರುವುದನ್ನು ಮನಗಾಣಬಹುದಾಗಿದೆ. ಇದರಂತೆ ಉಳಿದೆಲ್ಲ ದಾಸರ ಜೀವನ ಮತ್ತು ಪದಪದ್ಯಗಳಲ್ಲಿಯೂ ಇದೇ ತೆರನಾದ ನಿರೂಪಣೆಯನ್ನು ನೋಡಬಹುದಾಗಿದೆ

ದಾಸಮಾರ್ಗದಲ್ಲಿ ಪುರಂದರಾದಿ ಸಂಸಾರಿಕರು ಸಾಧನಾಕ್ರಮವನ್ನು ಅನುಸರಿಸಿ ತತ್ತ್ವಶಾಸ್ತ್ರದ ಪ್ರಮೇಯಗಳನ್ನು ಅರ್ಥಮಾಡಿಕೊಂಡು ಕೊನೆಯ ಘಟ್ಟದಲ್ಲಿ ಸರ್ವಸಮರ್ಪಣಾಭಾವದಿಂದ ಮುಕ್ತಿಯನ್ನು ಪಡೆದಿರುವ ವಿಷಯ ಸರ್ವರಿಗೂ ವಿದಿತ. ಅದರಂತೆ ಈ ದಾಸಾರ್ಯರಿಗೆಲ್ಲ ಗುರುಸ್ಥಾನದಲ್ಲಿದ್ದ ಅನೇಕ ಯತಿವರೇಣ್ಯರು ದಾಸಮಾರ್ಗದ ಮಹತಿಯನ್ನರಿತು ತಮ್ಮ ಸೇವೆಯನ್ನೂ ಅನುಭಾಂತರ ಸಮಾಜಕ್ಕೆ ಸಲ್ಲಿಸಿದ್ದಾರೆ. ಅವರಂತೆ ಹಾಡಿದ್ದಾರೆ, ನಲಿದಿದ್ದಾರೆ. ತಮ್ಮ ಜೀವನವನ್ನು ದೀವಟಿಗೆಯಾಗಿಸಿ ಸಾಧಕರಿಗೆ ಬೆಳಕು ನೀಡಿದ್ದಾರೆ. ಸಮರ್ಪಣಾಭಾವದಿಂದಲೇ ಪರಮಾತ್ಮನ ದರ್ಶನ ಖಂಡಿತವೆಂಬುದನ್ನು ಕನ್ನಡದ ಮುಖಾಂತರವಾಗಿಯೂ ಸುಸ್ಪಷ್ಟವಾಗಿ ತಿಳಿಸಿಕೊಟ್ಟಿದ್ದಾರೆ ಅವರುಗಳಲ್ಲಿ ನರಹರಿತೀರ್ಥರು ಶ್ರೀಪಾದರಾಯರು, ವ್ಯಾಸರಾಯರು, ವಾದಿರಾಜರು, ರಾಘವೇಂದ್ರತೀರ್ಥರು ಮೊದಲಾದವರು ಪ್ರಮುಖರು. ಒಂದು ಅರ್ಥದಲ್ಲಿ ಕನ್ನಡದಲ್ಲಿ ದಾಸಸಾಹಿತ್ಯದ ಉಗಮವು ಯತಿವರೇಣ್ಯರ ತಪಸ್ಸಿನ ದರ್ಶನದ ಮುಖಾಂತರವೇ ಎಂದು ಹೇಳಿದರೆ ಏನೂ ತಪ್ಪಾಗಲಾರದು. ಸಂಸಾರಿಕ ದಾಸರಂತೆ ಈ ಯತಿವರೇಣ್ಯರೂ ತಮ್ಮ ಜೀವನದುದ್ದಕ್ಕು ಸಮರ್ಪಣಾಭಾವದ ಭಕ್ತಿಯನ್ನೇ ಸಾಧಿಸಿ ಅದರ ಸೊಗಸನ್ನೆಲ್ಲ ತಮ್ಮ ಕನ್ನಡದ ರಚನೆಗಳಲ್ಲಿ ಧಾರೆಯೆರೆದು ದಾಸಸಾಹಿತ್ಯವನ್ನು ಶ್ರೀಮಂತಗೊಳಿಸಿದುದು ಐತಿಹಾಸಿಕ ಸತ್ಯ. ನಮಗೆ ದೊರೆತ ಆಧಾರಗಳ ಮೇಲಿಂದ ನರಹರಿತೀರ್ಥರೇ ಈ ದಿಸೆಯಲ್ಲಿ ಆದ್ಯಪ್ರವರ್ತಕರು. ಏಕೆಂದರೆ ಅವರ ಕೆಳಗಿನ ಕನ್ನಡ ಹಾಡು ಹರಿದಾಸ ಸಾಹಿತ್ಯದಲ್ಲಿಯೇ ಮೊದಲನೆಯ ಕೃತಿರಚನೆ ಎಂಬ ನಂಬಿಕೆ ಇದೆ.

"ಇಂತು ಮರುಳಾದೆ ॥ ಪ ॥
ಇಂತು ಮರುಳಾಗಿ ಬಯಲಿಗೆ ಬವಲಿದೆ
ರಕ್ಷಿಸಯ್ಯ ರಕ್ಷಕಕುಲ ತಿಲಕ ॥ಅ ಪ॥

ಮಾತಿನಲ್ಲಿ ಹರಿದಾಸತನ
ರೀತಿಯಲ್ಲಿ ಬಲು ಪ್ರೌಢತನ
ಪ್ರೀತಿ ಧನದುರ್ವಿಷಯದಲಿ ನಿ
ರ್ಭೀತಿ ದೈವದ್ರೋಹದಲಿ ॥ ೧ ॥

ಏಕಾಂತದಲಿ ಧನದಗೋಷ್ಠಿ
ಲೋಕಾಂತದಲಿ ವೈರಾಗ್ಯದಗೋಷ್ಠಿ
ಶ್ರೀಕಾಂತನ ಸೇವೆಗೆ ಅನುಮಾನ
ಭೂಕಾಂತನ ಸೇವೆಗೆ ಅನುಮಾನ ॥ ೨ ॥

ಭಜಿಸು ಬ್ರಹ್ಮಾದಿವಂದಿತ ಹರಿಯ
ತ್ಯಜಿಸು ಕಾಮಾದಿ ಶತ್ರುಗಳ
ಸುಜನವಂದಿತನಾದ ನರಹರಿಯ
ಭಜಿಸು ಶ್ರೀಹರಿ ರಘುಪತಿಯ ॥ ೩ ॥

ಈ ಹಾಡಿನಲ್ಲಿಯೂ ಬಹು ಸೂಕ್ಷ್ಮವಾಗಿ ಸರ್ವವನ್ನೂ ಪರಮಾತ್ಮನಿಗೆ ಅರ್ಪಿಸುವ ಕುರಿತು ಸದಾಚಾರವನ್ನು ಇಲ್ಲಿ ಕಾಣಬಹುದಾಗಿದೆ.

ಶ್ರೀ ನರಹರಿತೀರ್ಥರಿಂದ ದಾಸಸಾಹಿತ್ಯದ ಸುಳಿವು ಆರಂಭವಾಗಿದ್ದರೂ ಅದಕ್ಕೊಂದು ವಿಶಿಷ್ಟ ಸ್ಥಾನ ಬಂದುದು ಶ್ರೀಪಾದರಾಯರಿಂದ. ಇವರು ಕೋಲಾರಜಿಲ್ಲೆಯ ಮುಳಬಾಗಿಲಲ್ಲಿ ವಿದ್ಯಾಕೇಂ

ದ್ರವನ್ನು ಸ್ಥಾಪಿಸಿ, ಭಕ್ತಿಮಾರ್ಗಕ್ಕೆ, ದಾಸ ಪರಂಪರೆಗೆ ಸತ್ವವನ್ನು ನೀಡಿದರು. ಸ್ವತಃ 'ರಂಗ ವಿಠಲ' ಎಂಬ ಅಂಕಿತದೊಡನೆ ಪದಪದ್ಯಗಳನ್ನು ರಚಿಸಿ ಜನಸಾಮಾನ್ಯರ ಮನಸ್ಸಿನಲ್ಲಿ ನಲಿದಾಡಿದರು. ಸಮರ್ಪಣಾಭಾವದ ಭಕ್ತಿಯನ್ನು ಬಹು ಸುಲಭವಾಗಿ ತಿಳಿಸಲು ಪ್ರಯತ್ನಮಾಡಿ ಗೆಲುವು ಸಾಧಿಸಿದರು.

"ನಾ ನಿನಗೇನು ಬೇಡುವುದಿಲ್ಲ, ಎನ್ನ ॥ಪ॥

ಹೃದಯ ಮಂಟಪದೊಳು ನಿಂದಿರೋ ಕೃಷ್ಣ ॥ಅ.ಪ॥

ಎಂಬಂತಹ ಹಾಡುಗಳಿಂದ ಪ್ರೇರಣೆಪಡೆದು, ಮುಂದೆ ವ್ಯಾಸತೀರ್ಥರು 'ಸಿರಿಕೃಷ್ಣ' ಎಂಬ ಅಂಕಿತದೊಡನೆ ಅನೇಕ ಪದಪದ್ಯಗಳನ್ನು ರಚಿಸಿ ಪುರಂದರಾದಿ ಪ್ರಥಮ ಘಟ್ಟದ ದಾಸನರೇಣ್ಯರಿಗೆ ಪ್ರೇರಣೆಯ ಕೇಂದ್ರವಾಗಿ ಸಮರ್ಪಣಾಭಾವದ ಭಕ್ತಿಗೆ ಆದರ್ಶವಾದರು. ಅವರು ತಮ್ಮ ತಪಸ್ಸಿನ ಫಲವನ್ನು ಪರಮಾತ್ಮನಿಗೇ ಅರ್ಪಿಸಿದುದರಿಂದ ವಿಜಯನಗರ ವಿದ್ಯಾಕೇಂದ್ರವಾಯಿತು. ಜ್ಞಾನದ ನೀರಿಲ್ಲದೆ ಬಳಲುತ್ತಿದ್ದ ಜನರಿಗೆ ವ್ಯಾಸಾಬ್ಧಿ ನಿರ್ಮಿತವಾಯಿತು. ಅದನ್ನು ಅವರು ತಮ್ಮ ಹಾಡುಗಳಲ್ಲಿಯೂ ಬಹು ಮಾರ್ಮಿಕವಾಗಿ ಹೇಳಿದ್ದಾರೆ. ಅಂತಹ ಕೆಲವು ಪಾದಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ.

"ಸಂಸಾರವೆಂಬ ಮಾರಿಗೆ ಸಿಲುಕಿದೆ ಕಂಸಾರಿ
ಕರುಣದಿಂದೆನ್ನ ನೋಡಯ್ಯಾ ॥

* * * *

"ನೀನಲ್ಲದೆ ಅನ್ಯರಕ್ಷಕರನ್ನು ನಾಕಾಣೆ"

* * * *

"ಬಲ್ಲವಗಿಲ್ಲಿದೆ ವೈಕುಂಠ
ಬಲ್ಲವಗೆಲ್ಲೊ ಶ್ರೀಹರಿಪೂಜೆ"

* * * *

"ಅಂತರಂಗದಲ್ಲಿ ಹರಿಯ ಕಾಣದವ ಹುಟ್ಟು
ಕುರುಡನೊ"

* * * *

"ನಿನ್ನ ಧ್ಯಾನವನ್ನು ಮಾಡುತ್ತ ಮಾಡುತ್ತ
ಎನ್ನ ಮನ ಅನ್ಯಕ್ಕೆರಗುತ್ತದೆ

... ... ... ...

... . .. ...

...ಪರಮ ಪಾವನ ಗುಣಪೂರ್ಣನೆ ನಿನ್ನ
ಚರಣಯುಗಗಳನ್ನು ಧ್ಯಾನಿಸುತ್ತ ।
ನೆರೆಹೊರೆಯಲಿ ಮನಹೋಗದಂದಲಿ ಕರುಣಿಸಿ
ನಿಲ್ಲಿಸೊ ಸಿರಿಕೃಷ್ಣರಾಯ ॥

ಎಂಬಂತಹ ಕಡೆಯಲ್ಲೆಲ್ಲ ಆರ್ತಭಾವವು ಆತ್ಮ ಪರಿಶೋಧನೆ ಮಾಡಿ ಸಮರ್ಪಣದ ಕಡೆಗೆ ಸಾಧಕನನ್ನು ಮುಟ್ಟಿಸುವ ಸೋಪಾನಗಳನ್ನು ನೀಡಿರುವುದನ್ನೂ ಕಾಣಬಹುದಾಗಿದೆ.

ಈ ತರಹದ ಪ್ರೇರಣೆಯನ್ನು ಪಡೆದು ಕನ್ನಡದ ಕಣಜವನ್ನೂ ತುಂಬಿದ ಈ ಪರಂಪರೆಯಲ್ಲಿ ಬರುವ ಮತ್ತೊಬ್ಬ ಯತಿಗಳೆಂದರೆ ವಾದಿರಾಜರು. 'ಹಯವದನ' ಎಂಬುದು ಅವರ ಅಂಕಿತ. ಅವರ ಸಾಹಿತ್ಯದಲ್ಲಿಯೂ, "ಪಾನವಮಾಡುವೆನು ಹರಿನಾಮಾಮೃತವ" "ಅನುದಿನವು ಶ್ರವಣ ಮನನಾದಿ ಸಾಧನಮಾಡೊ। ಇನ್ನು ಸಂಶಯ ವ್ಯಾತಕೋ" ಎಂಬಂತಹ ಮಾತುಗಳಲ್ಲಿ ಭಕ್ತಿ ಮಾರ್ಗದ ಸಾಧನಸರ್ವಸ್ವವಾದ ಸಮರ್ಪಣಾ ಭಾವದ ನಾಡಿಯ ಮಿಡಿತವನ್ನು ಗುರುತಿಸಬಹುದಾಗಿದೆ.

ಇನ್ನು ಕಲಿಯುಗದ ಕಾಮಧೇನು ಕಲ್ಪವೃಕ್ಷವಾದ ಮಂತ್ರಾಲಯದ ರಾಘವೇಂದ್ರತೀರ್ಥರಂತೂ ತಾವು ಈಶನಲ್ಲಿಯ ಸಮರ್ಪಣಾಭಾವದಿಂದ ಗಳಿಸಿದ ಪುಣ್ಯಸಂಚಯವನ್ನೆಲ್ಲ ಈ ಯುಗದಲ್ಲಿ ಅನನ್ಯವಾಗಿ ಶರಣು ಬಂದ ಭಕ್ತರಿಗೆಲ್ಲ ಹಂಚುವುದರಲ್ಲೇ ನಿರತರಾದವರು. ಅಂತಹ ನಿದರ್ಶನಗಳನ್ನು ಸತ್ಯಸಾಕ್ಷಿಯಾಗಿ ಅನಂತ ಜನಕೋಟಿ ಪಡೆದು ಭಾಗ್ಯವಂತರಾಗಿದ್ದಾರೆ ಅವರೂ ಕೂಡ ಒಂದೇ ಒಂದು ಕನ್ನಡಪದ ಬರೆದಿದ್ದರೂ ಅದು ಸಮರ್ಪಣಭಾವದ ವೀಣೆಯ ಆತ್ಮಶ್ರೀಯನ್ನು ಮಿಡಿಸುತ್ತಿದೆ. ಅದು, "ಇಂದು ಎನಗೆ ಗೋವಿಂದ ನಿನ್ನ ಪಾದಾರವಿಂದವ ತೋರೋ ಮುಕುಂದನೇ" ಎಂಬ ಪಲ್ಲವಿಯೊಡನೆ ಆರಂಭವಾಗಿ, ಪಶ್ಚಾತ್ತಾಪದ ಹೊನಲನ್ನೇ ಹರಿಸಿ ನಿರ್ಮಲವಾಗಿ, "ಆರೂ ಕಾಯುವರಿಲ್ಲ ಸೇರಿದೆ ನಿನಗಯ್ಯಾ। ಧೀರ ವೇಣು ಗೋಪಾಲ ಪಾರುಗಾಣಿಸೋ ಸ್ವಾಮೀ" ಎಂದು ಕೊನೆಯಲ್ಲಿ ಸಲ್ಲಿಸುವ ಮೊರೆಯಲ್ಲಿ ಸಮರ್ಪಣಾ ಭಾವದ ಪರಮಾವಧಿಯನ್ನು ಕಾಣಬಹುದಾಗಿದೆ. ಅಂತೆಯೇ ರಾಘವೇಂದ್ರತೀರ್ಥರು ಇಂದಿಗೂ ಎಂದೆಂದಿಗೂ ಭಕ್ತಪ್ರಪಂಚಕ್ಕೆ ಕೊಡುಗೈ ದೊರೆಗಳಾಗಿದ್ದಾರೆ.

ಇದೇ ಭಕ್ತಿಮಾರ್ಗದ ಸಮರ್ಪಣಾಭಾವದ ಸಾಧನಮಾರ್ಗ. ಇದು ಬಹು ಸುಲಭವಾದದ್ದು. ಅಂತೆಯೇ ಶ್ರೀ ಪುರಂದರದಾಸರು,

"ಸುಲಭ ಪೂಜೆಯ ಕೇಳಿ ಬಲವಿಲ್ಲದವರು
ಕಾಲಕಾಲದ ಕರ್ಮ ಕಮಲಾಕ್ಷಗರ್ಪಿಸಿ॥ಪ॥

ಇರಳು ಹಚ್ಚುವದೀಪ ಹರಿಗೆ ನೀರಾಜನವು
ಮರುವುಡುವ ಧೋತರವು ಪರಮವಸ್ತ್ರ ॥
ತಿರುಗಾಡಿ ದಣಿಯುವುದು ಹರಿಗೆ
ಪ್ರದಕ್ಷಣೆಯು ।
ಮರಳಿ ಹೊಡಮರುಳುವುದು ನೂರೆಂಟು ದಂಡ
॥ ೧ ॥

ಎಂಬ ತಮ್ಮ ಕೀರ್ತನೆಯಲ್ಲಿ ಸಾಧನೆಯ ಸುಲಭ ಮಾರ್ಗವನ್ನು ಬಹಳ ಸುಲಭವಾಗಿ ಹೇಳಿದ್ದಾರೆ ಈ ತರಹದ ತಮ್ಮ ತಮ್ಮ ಅನುಭವಗಳನ್ನು ಎಲ್ಲ ದಾಸರೂ ತಮ್ಮ ತಮ್ಮ ಭಾಷೆಯಲ್ಲಿ ಸಾಮಾನ್ಯರ ಕಲ್ಯಾಣಕ್ಕಾಗಿ ಸಾದರಪಡಿಸಿದ್ದಾರೆ. ಹೀಗೆ ದಾಸಸಾಹಿತ್ಯದ ಯಾವ ಪದಪದ್ಯಗಳ ಪಾದಗಳ ಮೇಲೆ ಬಹಿರಂಗದ ಕಣ್ಣುಮುಚ್ಚಿ ಬೆರಳಿಟ್ಟರೂ ಅಲ್ಲಿ ಸಮರ್ಪಣಾಭಾವದ ಸೂಕ್ಷ್ಮತರಂಗಗಳೇ ಆ ಪದಪದ್ಯಗಳ ಜೀವನಾಡಿಯಾಗಿ ಮಿಡಿಯುತ್ತಿರುವುದು ಅಂತರಂಗದ ಕಣ್ಣಿಗೆ ಕಾಣುತ್ತದೆ. ಇವರೆಲ್ಲರ ಕೊಡುಗೆಯಲ್ಲಿ ಕಾಲದ ಅಂತರವಿದ್ದರೂ ಭಾಷೆಯ ಅಂತರವಿದ್ದರೂ, ಅಂಕಿತದ ಅಂತರವಿದ್ದರೂ ಅನುಭವದ ಅಂತಃಕರಣವು ಒಂದೇ ಆಗಿದೆ. ಆದ್ದರಿಂದಲೇ ಇವರೆಲ್ಲ ಬೋಧಿಸಿದುದು ಜನಪ್ರಿಯವಾಗಿದೆ.

---

(ರಾಯಚೂರಿನ ಹರಿದಾಸರ ಆರಾಧನೆಯಲ್ಲಿ ಮಂಡಿಸಿದ ಪ್ರಬಂಧದ ಸಾರ)

# ಸ್ವಾರಸ್ಯಗುಚ್ಛ

ಮತ್ತೀಗೆರೆ ಅನಂತು

ಇಕ್ಷುವನ್ನು ನೋಡಿ ತೃಪ್ತಿಪಟ್ಟರೆ ಅದರ ರಸ ಸವಿಯಲಾಗದು, ಅದನ್ನು ಜಗಿದಾಗ ಮಾತ್ರ ರಸಸ್ವಾದ ಮಾಡಬಹುದು, ಹೀಗೆಯೇ ಮಹರ್ಷಿಗಳ, ಕವಿಗಳ, ದಾಸವರೇಣ್ಯರ ಶ್ಲೋಕಗಳನ್ನು, ಪದ್ಯಗಳನ್ನು, ಹಾಡುಗಳನ್ನು ಕೇವಲ ಪಠಿಸಿದರೆ ಸಾಲದು, ಅದರಲ್ಲಿರುವ ಕೂಟಾರ್ಥಗಳ ಸ್ವಾರಸ್ಯವನ್ನು ಅನುಭವಿಸಬೇಕು, ಅರಗಿಸಿಕೊಳ್ಳಬೇಕು. ಆಗಮಾತ್ರ ಆ ನುಡಿಮುತ್ತುಗಳ ವಿಶೇಷ ಅರ್ಥ ಸ್ಫುರಿಸುವುದು.

ಕೆಲವು ಉದಾಹರಣೆಗಳನ್ನು ಅವಲೋಕಿಸೋಣ–

ಮಹರ್ಷಿ ವೇದವ್ಯಾಸರ ಆದರ್ಶ ಉಪದೇಶಗಳಲ್ಲಿ ಕೂಟಶ್ಲೋಕವೊಂದು ಹೀಗಿದೆ–

ಏಕಯಾದ್ವೇ ವಿ ನಿಶ್ಚಿತ್ಯ
ತ್ರೀಂಶ್ಚತುರ್ಭಿರ್ವಶೇ ಕುರು ।
ಪಂಚ ಜಿತ್ವಾ ವಿದಿತ್ವಾಷಟ್
ಸಪ್ತ ಹಿತ್ವಾ ಸುಖೀಭವ ॥

ಸಾಮಾನ್ಯ ಅರ್ಥ–ಒಂದರಿಂದ ಎರಡನ್ನು ನಿಶ್ಚಯಿಸಿ, ಮೂರನ್ನು ನಾಲ್ಕರಿಂದ ವಶೀಕರಿಸು; ಐದನ್ನು ಜಯಿಸಿ ಆರನ್ನು ತಿಳಿದು, ಏಳನ್ನು ಬಿಟ್ಟು ಸುಖಿಯಾಗಿರು, ಎಂದು ತಿಳಿಸಿದರೆ ಸ್ವಾರಸ್ಯ ತಿಳಿಯಲಾಗದು, ವಿಶೇಷ ಅರ್ಥವನ್ನು ಗಮನಿಸೋಣ–

ಒಂದಾದ ಬುದ್ಧಿಯಿಂದ ಕರ್ತವ್ಯಾಕರ್ತವ್ಯಗಳೆಂಬೆರಡನ್ನು ನಿಶ್ಚಯಿಸಿ, ಮಿತ್ರ, ಉದಾಸೀನ, ಶತ್ರುಗಳೆಂಬ ಮೂವರನ್ನು, ಸಾಮ, ದಾನ, ಭೇದ, ದಂಡಗಳೆಂಬ ಚತುರ್ವಿಧಗಳಿಂದ ವಶಮಾಡಿಕೊ, ಐದನ್ನು ಅಂದರೆ ಪಂಚೇಂದ್ರಿಯಗಳನ್ನು ಜಯಿಸಿ, ಆರನ್ನು – ಸಂಧಿ ವಿಗ್ರಹ, ಯಾನ, ಆಸನ, ದ್ವೈಧೀಭಾವ, ಸಾಮ, ಆಶಯಗಳನ್ನು ತಿಳಿದು, ಸಪ್ತವ್ಯಸನ – ಸ್ತ್ರೀ, ಜೂಜು, ಬೇಟೆ, ಮದ್ಯ, ಕಠಿಣವಾದ ಮಾತುಗಳು, ಕಠಿಣವಾದ ಶಿಕ್ಷೆ, ದುಂದುವೆಚ್ಚ, ಇವುಗಳನ್ನು ಬಿಟ್ಟು ಸುಖಿಯಾಗು- ಎಂಬುದೇ ಮೇಲಿನ ಶ್ಲೋಕದ ಸ್ವಾರಸ್ಯ.

ಕುಮಾರವ್ಯಾಸ ಭಾರತದಲ್ಲಿನ ಪದ್ಯವೊಂದನ್ನು ಗಮನಿಸೋಣ–

ಒಂದರಿಂದೆರಡಹುದನರಿ ಮೂ
ರಂದವನು ತಿಳಿ ನಾಲ್ಕರಲಿ ಮನ
ಗುಂಪದಿರೆದ್ವೈದರಲಿ ವರ್ಜಿಪುದಾರನೇಳರಲಿ ।
ಒಂದಿಸರೆಂಟುನು ವಿಚಾರಿಸಿ
ಮುಂದುವರಿವೊಂಬತ್ತರಲಿ ಮನ
ಗುಂದಿಸದಿರೀರೈದರಲಿ ಭೂಪಾಲ ಕೇಳೆಂದ ॥

ವಿದುರನು ಧೃತರಾಷ್ಟ್ರ ಚಕ್ರವರ್ತಿಯನ್ನು ಕುರಿತು ಹೀಗೆ ಹೇಳುತ್ತಾನೆ–

ಒಂದೇ ಅದ್ವಿತೀಯ ವಸ್ತುವಿನಿಂದ ಎರಡಾಗಿ ತೋರುವ ಈ ಪ್ರಪಂಚ ಹುಟ್ಟಿತು. ಮೂರು ಗುಣಗಳಾದ ಸತ್ವ, ರಜಸ್ಸು, ತಮೋಗುಣಗಳ ಸ್ವರೂಪವನ್ನು ಅರಿತುಕೊಂಡು, ನಾಲ್ಕು ಪುರುಷಾರ್ಥಗಳಲ್ಲಿ ಧರ್ಮ, ಅರ್ಥ, ಕಾಮ, ಮೋಕ್ಷಗಳಲ್ಲಿ ನಿಷ್ಠೆಯಿಂದ, ಪಂಚೇಂದ್ರಿಯಗಳಲ್ಲಿ ಆಸಕ್ತನಾಗದೆ ಅರಿಷಡ್ವರ್ಗ–ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳನ್ನು ಗೆದ್ದು, ಸಪ್ತವ್ಯಸನಗಳನ್ನು ತ್ಯಜಿಸಿ, ಯೋಗದ ಅಷ್ಟಾಂಗ ಯಮ, ನಿಯಮ, ಆಸನ, ಪ್ರಾಣಯಾಮ, ಪ್ರತ್ಯಾಹಾರ, ಧ್ಯಾನ, ಧಾರಣಾ, ಸಮಾಧಿ–ಶ್ರದ್ಧೆಯಿಂದ ಆಚರಿಸಿ, ನವವಿಧ ಭಕ್ತಿ–ಶ್ರವಣ, ಸ್ಮರಣ, ಕೀರ್ತನ, ವಂದನ, ಅರ್ಚನ, ಪಾದಸೇವನ, ಸಖ್ಯ, ದಾಸ್ಯ, ಆತ್ಮನಿವೇದನದಲ್ಲಿ ಮುಂದುವರಿದು, ಹತ್ತು ಬಗೆಯ ಸಾಮಾನ್ಯಧರ್ಮಗಳನ್ನು ಅಂದರೆ ಸಂತೋಷ, ತಾಳ್ಮೆ, ಮನೋನಿಗ್ರಹ, ಪರದ್ರವ್ಯದಲ್ಲಿ ಅನಪೇಕ್ಷೆ, ಶುಚಿತ್ವ, ಇಂದ್ರಿಯನಿಗ್ರಹ, ಶಾಸ್ತ್ರವಿಚಾರ, ಆತ್ಮಜ್ಞಾನ, ಕೋಪಿಸಿಕೊಳ್ಳದಿರುವುದು, ಸತ್ಯಗಳನ್ನು ಉಪೇಕ್ಷಿಸಬೇಡ, – ಎಂಬುದಾಗಿ ವಿದುರನೀತಿಯಲ್ಲಿ ಕೂಟಾರ್ಥ ಸ್ವಾರಸ್ಯ ವಿಶದೀಕರಿಸುತ್ತದೆ.

ಇನ್ನು ವಚನಗಳಲ್ಲಿರುವ ಸ್ವಾರಸ್ಯವನ್ನು ಆಸ್ವಾದಿಸೋಣ ಮಧುವಯ್ಯನ ವಚನ–

ಮಧುರವಾಣಿಯ ಉದರದಲ್ಲಿ ಒಂದು ನಿಜ ಕುಕ್ಕುಟ
ಕೂಗುತ್ತಿದೆ, ಮೂವರ ಮೊಲೆಯನುಂಡು ಮರೆ
ದೊರಗಬೇಡೆಂದು, ಬೆಳಗಾಯಿತ್ತು, ಅರ್ಕೇಶ್ವರ
ಲಿಂಗವ ನೋಡುವ ಬನ್ನಿಯೆಂದು ಕೂಗಿತ್ತಿದ್ದಿತ್ತು

ಮಧುರವಾಣಿಯ ಉದರದಲ್ಲಿ ಅಂದರೆ ಭಕ್ತಿಯುಕ್ತವಾದ ಜ್ಞಾನಶಕ್ತಿಯ ನಿಜಾಂತರಂಗದಲ್ಲಿ, ಸತ್ ಪ್ರಣವ ಜ್ಞಾನವು ಉದಯವಾಗಿ 'ಶಿವೋಹಂ, ಶಿವೋಹಂ' ಎಂಬ ನಿಜಕುಕ್ಕುಟ ಕೂಗುತ್ತದೆ. ಅನಂತರ ಇಚ್ಛಾ, ಜ್ಞಾನ, ಕ್ರಿಯೆಗಳೆಂಬ ತ್ರಿಶಕ್ತಿಗಳಿಂದುದಯವಾದ ಹೊನ್ನು, ಮಣ್ಣು, ಹೆಣ್ಣೆಂಬ ತ್ರಿವಿಧ ಸ್ಥಲವ ಸ್ವೀಕರಿಸಿ, ನಿನ್ನ ನಿಜವ ಕೆಡಿಸಿ ಮರೆವ ಮಾಯಾಪ್ರಪಂಚದಲ್ಲಿ ಮಗ್ನನಾಗಬೇಡ ಎಂಬುದೇ "ಮಾಯ ಮೊಲೆಯನುಂಡು ಮರೆದೊರಗಬೇಡ". ಹೀಗೆ ಶಿವಶರಣನ ಅಂತರಂಗದಲ್ಲಿ ಶಿವಜ್ಞಾನ ಪ್ರಕಾಶವಾಗಲೂ, ಆ ಸತ್ ಪ್ರಣವವು ಶಿವೋಹಂ ಭಾವವನ್ನು ಧ್ವನಿಗೈಯುತ್ತಿಹುದು ಎಂಬುದೇ 'ಬೆಳಗಾಯಿತ್ತು ಅರ್ಕೇಶ್ವರ ಲಿಂಗವ ನೋಡುವ ಬನ್ನಿ' ಎಂಬ ನುಡಿಗೆ ಅರ್ಥ

ಸರ್ವಜ್ಞನ ವಚನವೊಂದರಲ್ಲಿ–

"ಓಂಕಾರ ಮುಖವಲ್ಲ, ಆಕಾರವದಕಿಲ್ಲ
ಆಕಾಶದಂತೆ ಅಡಗಿಹುದು ಪರಬೊಮ್ಮ
ತಾ ಕಾಣದಯ್ಯ ಸರ್ವಜ್ಞ ॥"

ಓಂ ಅಂದರೆ 'ಅ' ಕಾರದಲ್ಲಿ ಅಕ್ಷರನಾಗಿರತಕ್ಕ ಪರಮಾತ್ಮನನ್ನು, 'ಮ' ಕಾರ–ಮಮಕಾರವುಳ್ಳ ಈ ಜೀವಾತ್ಮನು, ಉಕಾರ(ಯೋಗ) ಸೇರುವುದು ಆದುದರಿಂದ ಆಕಾರವದಕಿಲ್ಲ! ಆಕಾರದಂತೆ ಇದೆ ಎಂಬ ಶಬ್ದಕ್ಕೆ ಅರ್ಥ. ಇದನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬೇಕು – 'ಪರಬೊಮ್ಮ ತಾಕಾಣದಯ್ಯ' ಎಂಬ ಪದಕ್ಕೆ ಅರ್ಥ.

ಪುರಂದರದಾಸರ ಕೀರ್ತನೆಯೊಂದರಲ್ಲಿ ದ್ವಂದ್ವಾರ್ಥಗಳ ಸ್ವಾರಸ್ಯವನ್ನು ಅನುಭವಿಸಬಹುದು–

ಏನೊಂದರೊಂದಾಗಲಿ ॥ ಪ ॥

ನೂರೆಂಟು ದೇವರು ಮೊರ ತುಂಬಾ ಕಲ್ಲೇ ॥
ಮನೆಯ ಗಂಡ ಮಾಯವಾಗಲಿ ।
ಉಣಬಂದ ಮೈದುನ ಒರಗಲಿ ।
ಘನ ಅತ್ತಿಗೆ ನಾದಿನಿ ಸಾಯಲಿ ।
ನೆರಮನೆ ಹಾಳಾಗಿ ಹೋಗಲೋ ಹರಿಯೆ ॥ ೧ ॥

ಅತ್ತೆಯ ಕಣ್ಣೆರಡು ಇಂಗಲಿ ।
ಮಾವನ ಕಾಲೆರಡೂ ಮುರಿಯಲಿ ।
ಹಿತ್ತಲ ಗೋಡೆ ಬೀಳಲಿ ।
ಕಾಡ ಕತ್ತಲೆಯಾದರೂ ಕವಿಯಲೋ ಹರಿಯೇ ॥ ೨ ॥

ಕಂದನ ಕಣ್ಣೆರಡು ಮುಚ್ಚಲಿ ।
ಚಂದವಾದಹಾವು ಕಚ್ಚಲಿ ।

# ಸಪ್ತಗಿರಿ

ಒರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು.

2) ದೇವಸ್ಥಾನ ಮೊದಲಾದ ಪ್ರಾಜ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ–517507
ಚಿತ್ತೂರು ಜಿಲ್ಲೆ, ಆಂ. ಪ್ರ.

ದ್ವಂದ್ವಾರ್ಥಗಳೆಲ್ಲ ಬಿಚ್ಚಲಿ।
ಪುರಂದರ ವಿಠಲನು ಮೆಚ್ಚಲಿ ಹರಿಯೆ ॥ ೪ ॥

ಏನಾದರೊಂದಾಗಲಿ – ಯಾವುದಾದರೂ ನಿಶ್ಚಿತವಾದುದು ನನಗೆ ತಿಳಿಯಲಿ, ಆಗ ನನ್ನ ಸಾಧನೆಗೆ ಅನುಕೂಲವಾಗುವುದು. ನಿಶ್ಚಿತ ಮತಿಯಿಲ್ಲದಿರುವುದೇ ಅಪರಾಧ,

ನೂರೆಂಟು ದೇವರು ನೊರತುಂಬಾ ಕಲ್ಲೇ – ನೂರೆಂಟು ದೇವರುಗಳನ್ನು ನಂಬಿದರೆ ಹೃದಯ ಕಲ್ಲೇ;

ಮನೆಯ ಗಂಡ ಮಾಯವಾಗಲಿ –
ದೇಹಾಭಿಮಾನ ಮಾಯವಾಗಲಿ

ಉಣಬಂದ ವೈದುನ ಒರಗಲಿ–

ಮೋಸದ ಅರುಮಂದಿ ವೈದುನರು ಕಾಮ, ಕ್ರೋಧ, ಮೋಹ, ಮದ, ಮಾತ್ಸರ್ಯ ಲೋಭಗಳನ್ನು ಗಮನಿಸದೆ ಇರಬೇಕು;

'ಘನ ಅತ್ತಿಗೆ ನಾದಿನಿ ಸಾಯಲಿ, ನೆರೆಮನೆ ಹಾಳಾಗಿ ಹೋಗಲೋ ಹರಿಯೇ '– ಮನ, ಬುದ್ಧಿ, ಚಿತ್ತ, ಅಹಂಕಾರಗಳೆಂಬ ಅಂತಃಕರಣ ಚತುಷ್ಟಯಗಳಲ್ಲಿ ಅತ್ತಿಗೆ ನಾದಿನಿಯರು ಎಂದರೆ ದುರಾಭಿಮಾನ ಸಾಯಲಿ, ನೆರಮನೆ– (ಅತ್ತಿಗೆ) ಹೊರಗಿನಿಂದ ಬಂದವಳು-ಅಂತೆಯೇ ಅನ್ಯಕಾರಣಗಳಿಂದ ಉಂಟಾಗುವಂತಹುದು ಸಾಯಲಿ.

'ಅತ್ತೆಯ ಕಣ್ಣೆರಡು ಇಂಗಲಿ ಮಾವನ ಕಾಲೆರಡೂ ಮುರಿಯಲಿ ' - ದುಶ್ಚಿತ್ತವೆಂಬ ಅತ್ತೆಯ ಕಣ್ಣು ಇಂಗಿ, ಮಾವ ಅಂದರೆ ಆಸೆ; ಅದರ ಎರಡು ಕಾಲುಮುರಿಯಲಿ ' – ಆಸೆಯ ಸಂಕಲೆಯಿಂದ ಯಾರು ಬಂಧಿತನೋ ಅವನು ಓಡಾಡುವನು, ಈ ಕಾರಣದಿಂದ ಕಾಲೆರಡು ಮುರಿಯಲಿ ಎನ್ನುವುದು.

'ಹಿತ್ತಲ ಗೋಡೆ ಬೀಳಲಿ ಕಾಡಕತ್ತಲೆಯಾದರೂ ಕವಿಯ ಲೋ ಹರಿಯೇ ' – ಸಂಚಿತ ಕರ್ಮವೆಲ್ಲವೂ ನನ್ನಮೇಲೆ ಬಿದ್ದು, ಪ್ರಾರಬ್ಧವೆಂಬ ಕತ್ತಲೆ ಜೊತೆಗೂಡಿ ಕವಿಯಲಿ.

'ಕಂದನ ಕಣ್ಣೆರಡ ಮುಚ್ಚಲಿ, ಚಂದವಾದ ಹಾವು ಕಚ್ಚಲಿ ವ್ಯಾಮೋಹವೆಂಬ '– ಹರಿದ್ವೇಷವೆಂಬ ಕಂದನಿಗೆ ವಿಷಯ ವಿರಕ್ತಿ ಎಂಬ ಹಾವು ಕಚ್ಚಿ ಸಾಯಲಿ.

ಹೀಗೆ ದೇಹಾಭಿಮಾನದಿಂದ ಉಂಟಾದ ಈ ದುಷ್ಟ ಸಂಸಾರ ನಾಶವಾಗಿ - ಶುದ್ಧಾಂತಃಕರಣದಿಂದ ಪುರಂದರ ವಿಠಲನನ್ನು ಮೆಚ್ಚಿಸಿ ಮುಕ್ತರಾಗಲಿ ಎಂಬುದೇ ಈ ಕೀರ್ತನೆಯ ಸ್ವಾರಸ್ಯ.

ಮತ್ತೊಂದು ಕೀರ್ತನೆಯಲ್ಲಿ ಕೂಟಾರ್ಥ ಸೊಗಸು ಚಿಮ್ಮಿದೆ.

ಸುಲಭವಲ್ಲೊ ಮಹದಾನಂದ ॥ ಪ ॥
ಬೆಕ್ಕನ್ನು ಇಲಿ ನುಂಗುವ ತನಕ।
ಕಡುರಾಕ್ಷಸಿಯ ಗಿಣಿ ನುಂಗುವತನಕ।
ಸೊಕ್ಕಿನ ಕರಿಯು ನರಿ ನುಂಗುವತನಕ।
ಸುಲಭವಲ್ಲೊ ಮಹದಾನಂದ ॥

ಶಿವಿಯೆಂಬ ಬಿಲದಲ್ಲಿ ವಾಸವಾಗಿರುವ ಗುರು ಉಪದೇಶವೆಂಬ ಇಲಿಯೂ, ಮೋಸ, ಕುಟಿಲಬುದ್ಧಿಯ ಬೆಕ್ಕನ್ನು ನುಂಗಿದಾಗ – ಸುಲಭ ಆ ಆನಂದ. ನಿತ್ಯವೂ ಸಾಧನೆ ಮಾಡಿ ಪಂಜರದಲ್ಲಿ ಸಾಕಿದ ಗಿಣಿಯ ವಿಷಯಾನಂದವೆಂಬ ಕಡುರಾಕ್ಷಸಿಯನ್ನು ನುಂಗಿದಾಗ ಸುಲಭ–ಆ ಆನಂದ.

ಉಪಾಯವೆಂಬ (ನರಿ) ಭಕ್ತಿಯು ಕಾಮ ಕ್ರೋಧ ಲೋಭದಿಂದ ಸೊಕ್ಕಿದ (ಮದಕರಿ) ದೇಹವನ್ನು ನುಂಗಿದಾಗ ಸುಲಭ ಆ ಆನಂದ.

ಡಾ॥ ಡಿ.ವಿ.ಜಿ ಯವರ ಮಂಕುತಿಮ್ಮನ ಕಗ್ಗದಿಂದ.

"ವ್ಯಕ್ತಿಮಾತ್ರದ ವಿಭವ ವಿಶ್ವಾತ್ಮತಾನುಭವ।
ಮುಕ್ತಿ ಸುಖವಾಂತರಿಕವದು ನಿರವಧಿ ಸುಖ ॥
ಭಾಕ್ತ ಪ್ರಪಂಚ ಸುಖವೆಂತಪರಿಮಿತ
ವಹುದು ?
ರಿಕ್ತ ಸುಖ ಬಾಹ್ಯ ಸುಖ – ಮಂಕುತಿಮ್ಮ ॥"

ವಿಶ್ವಾತ್ಮಭಾವದ ಅನುಭವವು 'ವ್ಯಕ್ತಿ' ಗೆ ಮಾತ್ರ ಲಭ್ಯವಿರುವ ಐಸಿರಿ. ಅದು ಸರ್ವ ಸಾಮಾನ್ಯವಾಗತಕ್ಕದ್ದಲ್ಲ. ಬಾಹ್ಯಪ್ರಪಂಚದ– ನೋಟ, ಆಟ, ಊಟ, ಸಂಗೀತಾದಿ ಸಂತೋಷಗಳಾದರೋ ಬಹು ಜನ ಸಾಮಾನ್ಯವಾದವು. ಆತ್ಮೈಕ್ಯದ ಅನುಭವ ಅಂಥಾದ್ದಲ್ಲ; ವ್ಯಕ್ತಿಯ ಅಂತರಂಗದ್ದು, ಆದುದರಿಂದ ಅದು 'ನಿರವಧಿ' ಮೇರೆಯಿಲ್ಲದ್ದು ಪ್ರಾಪಂಚಿಕ ಸುಖವಾದರೋ 'ಭಾಕ್ತ' ಎಂದರೆ ಇನ್ನೊಂದನ್ನು ಆಶ್ರಯಿಸಿದ್ದು ಸ್ವತಃಸಿದ್ಧವಾದದ್ದಲ್ಲ. ಕೇಳುಮಟ್ಟದ್ದು. ಆದುದರಿಂದ ಅದು ಹೇಗೆ 'ಅಪರಿಮಿತ'ವಾದೀತು ? ಅದು ರಿಕ್ತ ಅಂದರೆ ನಿಸ್ಸಾರವಾದದ್ದು ಅಲ್ಲವೇ ! ಇದೇ ಮೇಲಿನ ಕಗ್ಗದ ಅಂತರಾರ್ಥದ ಸ್ವಾರಸ್ಯ. ಹೀಗೆ ಅನೇಕ ಉದಾಹರಣೆಗಳನ್ನು ಕೊಡಬಹುದು. ಒಟ್ಟಿನಲ್ಲಿ ಈ ಮೇಲಿನ ಕೂಟಾರ್ಥ ಪದ್ಯಗಳ ಉದ್ದೇಶ– ನಾವು ಮಹನೀಯರ ಶ್ಲೋಕಗಳಾಗಲಿ ವಚನಗಳಾಗಲಿ, ಪದ್ಯಗಳಾಗಲಿ ಮತ್ತು ಹಾಡುಗಳಾಗಲಿ ಸರಿಯಾಗಿ ಅಂದರೆ ಅಕ್ಷರಾರ್ಥವನ್ನು ಗ್ರಹಿಸದೆ ವಿಶೇಷ ಅರ್ಥಗಳನ್ನು ಸ್ವಾರಸ್ಯವನ್ನು ಗ್ರಹಿಸಬೇಕು. ಈ ಗ್ರಹಿಕೆಯ ಲೋಪವಾದರೆ ಕೂಟಾರ್ಥಗಳ ಸ್ವಾರಸ್ಯದಿಂದ (ಅಂತರಾರ್ಥಗಳಿಂದ) ವಂಚಿತರಾಗುವೆವು ಎಂಬುದು ನಮ್ಮ ನಂಬಿಕೆ. ★

# ಸತ್ಯವೇ ದೇವರು

**ಶ್ರೀ ಚಿ. ನ. ಕೃಷ್ಣಮೂರ್ತಿ**

'ಸತ್ಯ' ಈ ಮಾತಿನ ಅರ್ಥವೇನು. ಎಂಪರಿ ಸಂಗ್ರಹವಾಗಿ ಹೀಗೆ ಹೇಳಿದ್ದಾರೆ "ಸತ್ಯಂ ಯಥಾರ್ಥ ಭಾಷಣಂ ಕಥನ ವಾ" ಎಂದರೆ ಯಥಾರ್ಥವಾಗಿ ಮಾತನಾಡುವುದಾಗಲಿ ಹೇಳುವುದಾಗಲಿ ಅದಕ್ಕೆ ಸತ್ಯವೆಂದು ಹೆಸರು. ಯಾರು ತಾವು ಕಂಡ ವಿಷಯವನ್ನು ಅಥವಾ ಅನುಭವಿಸಿದ್ದನ್ನು ವ್ಯತ್ಯಾಸಗೊಳಿಸದೆ ಯಥಾರ್ಥವಾಗಿ ಹೇಳುವನೋ ಆತನೇ ಸತ್ಯವಂತ. ಈ ವ್ರತವನ್ನು ಯಾರು ಆಚರಿಸುತ್ತಾರೋ ಆತನೇ ತಪಸ್ವಿ. ಸತ್ಯ ಹೇಳುವುದಕ್ಕೂ ತಪಸ್ಸಿಗೂ ಯಾವ ವ್ಯತ್ಯಾಸವೂ ಇಲ್ಲ. ಯಾರು ಕಠೋರವಾಗಿದ್ದರೂ ಸತ್ಯವನ್ನೇ ನುಡಿಯುವರೋ ಅವರು ಬ್ರಹ್ಮೋಪಾಸನೆಗೆ ಯೋಗ್ಯರು

ಛಾಂದೋಗ್ಯ ಉಪನಿಷತ್ತಿನಲ್ಲಿ ಒಂದು ಪ್ರಸಂಗ ಬರುತ್ತದೆ ಸತ್ಯಕಾಮ ಜಾಬಾಲನು ಒಂದು ದಿನ ತನ್ನ ತಾಯಿಯನ್ನು ಕುರಿತು, "ಅಮ್ಮ ನಾನು ಆಚಾರ್ಯರ ಬಳಿ ವಿದ್ಯಾಭ್ಯಾಸಕ್ಕಾಗಿ ಹೋಗುತ್ತಿದ್ದೇನೆ. ನಾನು ಯಾವ ಗೋತ್ರದವನು ? ಎಂದು ಪ್ರಶ್ನಿಸಿದನು ಜಬಾಲ ಮಗನನ್ನು ಕುರಿತು ಹೇಳಿದಳು. "ಮಗೂ, ನೀನು ಯಾವ ಗೋತ್ರದವನೆಂದು ನಾನು ಅರಿಯೆನು ಪರಿಚಾರಿಕೆಯಾಗಿದ್ದಾಗ ಯವ್ವನದಲ್ಲಿ ನಿನ್ನನ್ನು ಹಡೆದನು. ನಿನ್ನ ಗೋತ್ರ ನನಗೆ ತಿಳಿಯದು ಆದರೆ ನಾನು ಜಬಾಲ ನೀನು ಸತ್ಯಕಾಮ. ಆದ್ದರಿಂದ ಸತ್ಯಕಾಮ ಜಾಬಾಲನೆಂದೇ ಹೇಳಿಕೊ." ಸತ್ಯಕಾಮ ಗೌತಮ ಮುನಿಗಳ ಬಳಿ ಬಂದು ತನ್ನನ್ನು ಶಿಷ್ಯನನ್ನಾಗಿ ಸ್ವೀಕರಿಸಿ ವಿದ್ಯೆಯನ್ನು ಹೇಳಿಕೊಡಬೇಕು ಎಂದು ಪ್ರಾರ್ಥಿಸುತ್ತಾನೆ ಗೌತಮರು "ನೀನು ಯಾವ ಗೋತ್ರದವನು ?" ಎಂದರು. ಸತ್ಯಕಾಮ ಉತ್ತರವಾಗಿ "ಭಗವಾನ್ ನನ್ನ ಗೋತ್ರ ತಿಳಿಯದು. ನನ್ನ ತಾಯಿ ಯವ್ವನದಲ್ಲಿ ನನ್ನನ್ನು ಹಡೆದಳು. ಆಕೆ ಜಬಾಲ, ನಾನು ಸತ್ಯಕಾಮನಂತೆ. ಆದ್ದರಿಂದ ನನ್ನ ಹೆಸರು ಸತ್ಯಕಾಮ ಜಾಬಾಲ" ಎಂದನು ಗೌತಮರು ಸತ್ಯಕಾಮನ ಸತ್ಯ ಸಂಧತೆಯನ್ನು ಮೆಚ್ಚಿ ಅವನನ್ನು ಶಿಷ್ಯನನ್ನಾಗಿ ಸ್ವೀಕರಿಸುತ್ತಾರೆ.

ಸತ್ಯ ಎಷ್ಟೇ ಅಪ್ರಿಯವಾಗಿರಲಿ ಅಥವಾ ಸತ್ಯ ನುಡಿಯುವುದರಿಂದ ಬೆಟ್ಟದಷ್ಟು ಸಂಕಟಗಳು ಎದುರಾಗಲಿ ಸತ್ಯವನ್ನೇ ಆಡಿದರೆ ಶಿವನ ಸಾಮಿಪ್ಯ ದೊರೆಯುವುದರಲ್ಲಿ ಸಂದೇಹವಿಲ್ಲ. ಮಹಾಕವಿ ರಾಘವಾಂಕ ತನ್ನ 'ಹರಿಶ್ಚಂದ್ರ ಕಾವ್ಯ' ದಲ್ಲಿ "ಸತ್ಯವೆಂಬುದೇ ಹರ, ಹರನೆಂಬುದೇ ಸತ್ಯ"ಎಂಬ ಮಾತನ್ನು ಸತ್ಯವ್ರತನಾದ ಹರಿಶ್ಚಂದ್ರನ ಮೂಲಕ ಸಾರಿದ್ದಾನೆ.

"ಕೋಣನೆರಡುಂ ಹೋರೆ ಗಿಡುವಿಂಗೆ ಮಿತ್ತು" ಎಂಬಂತೆ ದೇವೇಂದ್ರನ ಸಭೆಯಲ್ಲಿ ವಸಿಷ್ಠ ವಿಶ್ವಾಮಿತ್ರರಲ್ಲಿ ನಡೆದ ವಾಗ್ವಾದಕ್ಕೆ ಹರಿಶ್ಚಂದ್ರ ಸಿಲುಕಿ ಆತನ ಸತ್ಯವ್ರತದ ಕಠಿಣ ಪರೀಕ್ಷೆ ವಿಶ್ವಾಮಿತ್ರರಿಂದ ಪ್ರಾರಂಭವಾಗುತ್ತದೆ. ಮುನಿಯ ಕೋಪಕ್ಕೆ ಒಳಗಾದ ಹರಿಶ್ಚಂದ್ರ ರಾಜ್ಯ ಕೋಶಾದಿಗಳನ್ನು ಕಳೆದುಕೊಂಡು ಭಿಕಾರಿಯಂತೆ ಹೆಂಡತಿ ಮಗನನ್ನು ಕರೆದುಕೊಂಡು ಕಾಶಿ ಪಟ್ಟಣಕ್ಕೆ ಬರುತ್ತಾನೆ. ಕೊಟ್ಟ ಗಡುವಿನೊಳಗಾಗಿ ಮುನಿಗಳಿಗೆ ದಕ್ಷಿಣೆಯ ಹಣವನ್ನು ಸಲ್ಲಿಸಬೇಕೆಂಬ ಆತಂಕ ಮತ್ತೊಂದು ಕಡೆ ನಕ್ಷತ್ರಕನ ಕಿರುಕುಳ.ಹಣಕ್ಕಾಗಿ ಹೆಂಡತಿ,ಮಗನನ್ನು ಮಾರುವ ದೃಶ್ಯವಂತೂ ಓದುಗರ ಕರಳು ಮಿಡಿಯುತ್ತದೆ ಇಷ್ಟಾದರೂ ಅವನ ಅಗ್ನಿ ಪರೀಕ್ಷೆ ಮುಗಿಯಲಿಲ್ಲ. ಪಟ್ಟಮಹಿಷಿಯಾದ ಚಂದ್ರಮತಿ ಆಳಾಗಿ ದುಡಿಯಬೇಕಾದ ಪ್ರಸಂಗ. ರಾಜಕುಮಾರ ಲೋಹಿತಾಶ್ವ ನಿತ್ಯವೂ ಕಾಡಿಗೆ ಹೋಗಿ ಹುಲ್ಲು ಕಟ್ಟಿಗೆ ತರುವ ಕೆಲಸ ಮಾಡಬೇಕಾಯಿತು ಒಂದು ದಿನ ಕಾಡಿಗೆ ಹೋದ ಲೋಹಿತಾಶ್ವ ಹಿಂದಿರುಗಲೇ ಇಲ್ಲ ಹಾವು ಕಚ್ಚಿ ಮಡಿದ ಮಗನ ಸಂಸ್ಕಾರಕ್ಕಾಗಿ ಚಂದ್ರಮತಿ ಸ್ಮಶಾನಕ್ಕೆ ಬರುತ್ತಾಳೆ ಸ್ಮಶಾನದ ಸುಂಕವನ್ನು ಕೊಡದೆ ಹೆಣವನ್ನು ಸುಡುವಂತಿಲ್ಲ. ಸ್ಮಶಾನದ ಕಾವಲಗಾರನಾದ ಹರಿಶ್ಚಂದ್ರ ಪಟ್ಟಣಕ್ಕೆ ಹೋಗಿ ಹೇಗಾದರೂ ಮಾಡಿ ಸುಂಕವನ್ನು ತರುವಂತೆ ಹೆಂಡತಿಗೆ ಹೇಳುತ್ತಾನೆ. ಮಾರ್ಗ ಮಧ್ಯದಲ್ಲಿ ಕಳ್ಳರ ಕೈಗೆ ಸಿಕ್ಕಿದ ಚಂದ್ರಮತಿಯ ಮೇಲೆ ಕೊಲೆಯ ಅಪರಾಧ ಬಂದು ಮರಣದಂಡನೆಗೆ ಗುರಿಯಾಗುತ್ತಾಳೆ. ಹರಿಶ್ಚಂದ್ರನೇ ಹೆಂಡತಿಯ ಶಿರವನ್ನು ಕತ್ತರಿಸಬೇಕಾಗುತ್ತದೆ. ಒಬ್ಬ ವ್ಯಕ್ತಿಯ ಜೀವನದಲ್ಲಿ ಇದಕ್ಕಿಂತ ದುಃಖದ ಸನ್ನಿವೇಶ ಬಹುಶಃ ಬೇರೆ ಬರಲಾರದು. ಆದರೂ ಧೃತಿಗೆಡದ ಹರಿಶ್ಚಂದ್ರ ಸತ್ಯವನ್ನು ಉಳಿಸಿಕೊಳ್ಳುವುದಕ್ಕಾಗಿ ಅದನ್ನೂ ನಡೆಸಿ ಶಿವ ಸಾಕ್ಷಾತ್ಕಾರವನ್ನು ಹೊಂದುತ್ತಾನೆ

ಗಾಂಧೀಜಿಯವರು ಹುಡುಕಿಕೊಂಡು ಹೊರಟ ಸತ್ಯ ಕೇವಲ ಇಂದ್ರಿಯ ಗೋಚರವಾದ ವ್ಯವಹಾರಿಕ ಸತ್ಯವಲ್ಲ. ಇಡೀ ಲೋಕದ ವ್ಯಾಪಾರಕ್ಕೆ ಹಿನ್ನೆಲೆಯಾಗಿರುವ ಕಾರಣಭೂತವಾದ ನಿತ್ಯ ಸತ್ಯವನ್ನು ಅರಿಸಿ ಹೊರಟರು ಅವರು ತಮ್ಮ ಅನ್ವೇಷಣೆಯಲ್ಲಿ ಸಿದ್ಧಿಯನ್ನು ಪಡೆದು ಸತ್ಯವೇ ದೇವರೆಂದು ಸಾರಿದರು. ಗಾಂಧೀಜಿಯವರು ಬರೀ ಸತ್ಯದ ಜಪ ಮಾಡಲಿಲ್ಲ. ಸತ್ಯ ಗೆಲ್ಲಬೇಕಾದರೆ 'ಆಗ್ರಹವೂ' ಬೇಕು. ತಾನು ಬದುಕುತ್ತಿರುವ ಸಮಾಜದಲ್ಲಿ ಅನ್ಯಾಯ, ಅಧರ್ಮ, ಅಸತ್ಯಗಳನ್ನು ಅಲಕ್ಷಿಸಿ ಉದಾಸೀನ ವೃತ್ತಿಯಿಂದ ನೋಡುವ ವ್ಯಕ್ತಿ ಸತ್ಯದ ಸಾಕ್ಷಾತ್ಕಾರವನ್ನು ಗಳಿಸಲಾರನು. ಆದ್ದರಿಂದಲೇ ಗಾಂಧೀಜಿ ಇಂತಹ ಅನ್ಯಾಯಗಳನ್ನು ತೊಡೆದು ಹಾಕಲು ಸತ್ಯಾಗ್ರಹದ ಮಾರ್ಗವನ್ನು ಅನುಸರಿಸಿದರು. 'ಸತ್ಯಾಗ್ರಹ' ಎಂಬ ಪದವನ್ನು ಹುಟ್ಟು ಹಾಕಿದವರೇ ಗಾಂಧೀಜಿ. ಗಾಂಧೀಜಿಯವರ ಇಡೀ ಜೀವನ ಸತ್ಯ ಶೋಧನೆಗಾಗಿ ಮೀಸಲಾಯಿತು. ಸತ್ಯಕ್ಕಾಗಿ ತ್ರಿಕರಣ ಪೂರ್ವಕವಾಗಿ ದುಡಿದು ಇಡೀ ವಿಶ್ವಕ್ಕೆ ಒಂದು ಹಿರಿಯ ಆದರ್ಶವನ್ನು ನೀಡಿ ಅಮರರಾದರು.

ಗಾಂಧೀಜಿಯವರು ಸತ್ಯವನ್ನು ಕುರಿತಾದ ಕೆಲವು ಅಮೂಲ್ಯವಾದ ಮಾತುಗಳನ್ನು ಹೇಳಿದ್ದಾರೆ.

"ಸತ್ಯವನ್ನು ನುಡಿಯುವುದು, ಸತ್ಯವನ್ನು ಆಲೋಚಿಸುವುದು, ಸತ್ಯವನ್ನು ಆಚರಿಸುವುದು– ಇದುವೇ ಸತ್ಯ ಮಾರ್ಗದ ಪ್ರಥಮ ಸೂತ್ರ".

"ಸತ್ಯವು ಒಂದು ವಿಶಾಲ ವೃಕ್ಷದಂತೆ, ಅದನ್ನು ನಾವು ಹೆಚ್ಚು ಹೆಚ್ಚು ಪೋಷಣೆಮಾಡಿದಂತೆ ಹೆಚ್ಚು ಹೆಚ್ಚು ಫಲ ನೀಡುತ್ತದೆ".

ಮುಂಡಕೋಪನಿಷತ್ತಿನಲ್ಲಿ 'ಸತ್ಯ ಮೇವ ಜಯತೇ'ಎಂಬ ಮಾತು ಬಂದಿದೆ. ಈ ಮಾತನ್ನೇ ನಾವು ನಮ್ಮ ದೇಶದ ನ್ಯಾಯಾಲಯದ ಸಂಕೇತವಾಗಿ ಸ್ವೀಕರಿಸಿದ್ದೇವೆ ಏಕೆಂದರೆ ಶಾಶ್ವತವಾದ ಸತ್ಯವೇ ಗೆಲ್ಲುವುದು. ಸತ್ಯದ ವಿನಃ ಬೇರೆ ಯಾವ ವಸ್ತುವಿಗೂ ಶಾಶ್ವತ ಅಸ್ತಿತ್ವ ಇರುವುದಿಲ್ಲ. ಭಗವದ್ಗೀತೆಯಲ್ಲಿಯೂ ಇದೇ ಮಾತು ಬರುತ್ತದೆ.

'ನಾಸತೋ ವಿದ್ಯತೇ ಭಾವೋ ನಾ ಭಾವೋ ವಿದ್ಯತೇ ಸತ್ಯ' ಅಸತ್ಯಕ್ಕೆ ಅಸ್ತಿತ್ವ ಇಲ್ಲ. ಸತ್ಯಕ್ಕೆ ಅಭಾವವಿಲ್ಲ ಎಂದರೆ ಚ್ಯುತಿ ಇಲ್ಲದುದು ಸತ್ಯ. ಪ್ರಪಂಚದಲ್ಲಿ ಅವಿನಾಶಿಯಾದ ವಸ್ತು ಎಂದರೆ ಭಗವಂತನೊಬ್ಬನೆ. ಆದ್ದರಿಂದಲೇ ಸತ್ಯದ ಅವಿಷ್ಕಾರದಿಂದ ದೇವರ ಸಾಕ್ಷಾತ್ಕಾರವೆಂದು ವೇದೋಪನಿಷತ್ತುಗಳು ಸಾರಿರುವುವು.

ರಾಮಾಯಣದಲ್ಲಿ ಸತ್ಯವನ್ನು ಕುರಿತು ಈ ಮಾತು ಬರುತ್ತದೆ

"ಸತ್ಯವೇ ದೇವರು, ಲಕ್ಷ್ಮಿಯು ಸದಾ ಸತ್ಯವನ್ನೇ ಆಶ್ರಯಿಸುತ್ತಾಳೆ ಸತ್ಯವೇ ಎಲ್ಲಕ್ಕೂ ಮೂಲ, ಸತ್ಯಕ್ಕಿಂತ ಮಿಗಿಲಾದುದಿಲ್ಲ".

ಶಿವಶರಣರು ಸತ್ಯಕ್ಕೆ ಬಹು ಹೆಚ್ಚಿನ ಮಹತ್ವವನ್ನು ನೀಡಿದರು. ಸಾಧಕನಿಗೆ ಅತ್ಯಗತ್ಯವಾದ ಧರ್ಮವೆಂದರೆ ಸತ್ಯಪ್ರಿಯತೆ ಎಂದಿದ್ದಾರೆ. ಬಸವಣ್ಣನವರು.

ದೇವಲೋಕ ಮರ್ತ್ಯ ಲೋಕವೆಂಬುದು
ಬೇರಿಲ್ಲ ಕಾಣಿಭೋ
ಸತ್ಯವ ನುಡಿವುದೆ ದೇವಲೋಕ ಮಿಥ್ಯವ
ನುಡಿವುದೆ ಮರ್ತ್ಯ ಲೋಕ

ಎಂದಿದ್ದಾರೆ. ಅಲ್ಲದೆ 'ದಿಟವ ನುಡಿವುದು ನುಡಿದಂತೆ ನಡೆವುದು ಇದೇ ಸಾಧಕನ ಮೂಲಮಂತ್ರ' ವೆನ್ನುತ್ತಾರೆ ಬಸವಣ್ಣನವರು. 'ಸತ್ಯವೆಂಬುದೇ ಸಂಶೀಲ' ಎಂದರು ಪ್ರಭುದೇವರು ದೇವಲೋಕದಲ್ಲಿ ದೊರೆಯುವ ಭೋಗ ವಿಲಾಸಗಳು ಕಾಲ್ಪನಿಕವಾದದ್ದು ಸತ್ಯದ ಆಚರಣೆಯಿಂದ ಮಾನವ ಇಹದಲ್ಲಿಯೇ ಪರಕ್ಕೆ ಸಾಧಕವಾಗುವಂತಹ ಸುಖವನ್ನು ಗಳಿಸಬಹುದು ಅಸತ್ಯದ ಹಾದಿಯಲ್ಲಿ ಜೀವನವನ್ನು ನಡೆಸಿದರೆ ಸುಖ ದೊರೆತರೂ ಇಹದಲ್ಲಿಯೇ ನರಕ ಸಮಾನವಾದ ಕಷ್ಟಗಳನ್ನು ಅನುಭವಿಸಬೇಕಾಗುವುದಲ್ಲದೆ ಅಂತಹ ಅಸತ್ಯದ ಬದುಕು ಪರಕ್ಕೆ ಬಾಧಕವೇ ಆಗುತ್ತದೆ. ಬಸವಣ್ಣನವರ ದೃಷ್ಟಿಯಲ್ಲಿ ದೇವಲೋಕ ಮರ್ತ್ಯಲೋಕವೆಂಬುದಿಲ್ಲ. ಇವೆರಡೂ ಸತ್ಯ ಮತ್ತು ಅಸತ್ಯಗಳಲ್ಲಿ ಅಡಗಿವೆ. ಈ ತತ್ತ್ವವನ್ನು ಅರಿತು ನಮ್ಮ ನಡೆನುಡಿಗಳಲ್ಲಿ ಸತ್ಯಾಚರಣೆಯನ್ನು ತರುವುದರಿಂದಲೇ ಇಹಪರಗಳೆರಡಕ್ಕೂ ಯೋಗ್ಯವೆನಿಸುತ್ತದೆ

ಸತ್ಯದ ಮಹತ್ವ ಇಷ್ಟು ಅತಿಶಯವಾಗಿದ್ದರೂ ಇಂದಿನ ಸಾಮಾಜಿಕ ಜೀವನವನ್ನು ಗಮನಿಸಿದಾಗ ಸತ್ಯ ಕ್ರಮೇಣ ಕ್ಷೀಣಿಸುತ್ತಿರುವುದು ಸ್ಪಷ್ಟವಾಗುತ್ತದೆ. ಮಾನವನ ಬದುಕಿನ ನೀತಿಯ ನೆಲೆಕಟ್ಟು ಸಡಿಲವಾಗಿ ಭೋಗ ಜೀವನದ ಬೆಂಬತ್ತಿರುವ ಮನುಷ್ಯ ಸುಖ ಸಾಮಗ್ರಿಗಳನ್ನು ಹೊಂದಿಸಿಕೊಳ್ಳುವುದೇ ತನ್ನ ಬದುಕಿನ ಮುಖ್ಯ ಧ್ಯೇಯವನ್ನಾಗಿ ಮಾಡಿಕೊಂಡು ಅವುಗಳಿಗಾಗಿ ಧರ್ಮ, ನೀತಿಗಳನ್ನು ಮೂಲೆ ಗುಂಪಾಗಿಸಿದ್ದಾನೆ. ಸತ್ಯ ಮತ್ತು ಅಸತ್ಯಗಳ ನಡವೆ ಶ್ರೇಷ್ಠವಾದುದನ್ನು ಆರಿಸಿಕೊಳ್ಳಲು ದೇವರು ಎಲ್ಲರಿಗೂ ಅವಕಾಶವನ್ನು ಕಲ್ಪಿಸಿದ್ದರೂ ಅವನು ಉತ್ತಮವಾದುದನ್ನು ಆರಿಸಿಕೊಳ್ಳುವ ವಿವೇಕವನ್ನು ಕಳೆದುಕೊಂಡಿದ್ದಾನೆ ಕ್ಷಣಿಕವಾದ ಭೋಗಭಾಗ್ಯಗಳನ್ನು ಹೊಂದಲು ಸುಳ್ಳಿನ ಕಂತೆಯನ್ನೇ ಸೃಷ್ಟಿಸುತ್ತಿದ್ದಾನೆ. ತನ್ನ ಸುಖಸಾಧನೆಗಾಗಿ ಸತ್ಯದ ಮುಖವಾಡವನ್ನು ಹೊತ್ತು ಜನರನ್ನು ಮೋಸಗೊಳಿಸುತ್ತಿದ್ದಾನೆ. ಇವೆಲ್ಲಕ್ಕೂ ಕಾರಣ ನಾಗರಿಕತೆಯ ಈ ಯುಗದಲ್ಲಿನ ಆಕರ್ಷಣೆಗಳ ಸೆಳೆತ. ಈ ಸೆಳೆತಕ್ಕೆ ಬಲಿಯಾದ ಮನುಷ್ಯ ಮನೋನಿಗ್ರಹವನ್ನು ಕಳೆದುಕೊಂಡು ದುರಾಸೆಗೆ ಒಳಗಾಗಿ ಅಸತ್ಯ, ಅನ್ಯಾಯ ವಂಚನೆ ಇವುಗಳ ಮೂಲಕವಾಗಿಯಾದರೂ ಅವುಗಳನ್ನು ಪಡೆಯಲು ಪ್ರಯತ್ನಿಸುತ್ತಿದ್ದಾನೆ. ಆದರೆ ವ್ಯಕ್ತಿ ತನ್ನ ವಿವೇಕಕ್ಕೆ ಅಂಟಿದ ಮಸಿಯನ್ನು ಒರೆಸಿ ಪರಿಶೀಲಿಸಿಕೊಂಡಾಗ ತನ್ನ ಕೃತ್ರಿಮ ಬಾಳಿನ ಅರಿವುಂಟಾಗಿ ನಿಜವಾದ ಸುಖದ ಬದುಕಿನ ಮಾರ್ಗ ಯಾವುದೆಂಬುದು ಗೋಚರಿಸುತ್ತದೆ. ಗಾಂಧೀಜಿಯವರು ನುಡಿದಂತೆ ಸತ್ಯವನ್ನು ಬೆಂಬಲಿಸಿ ಅದನ್ನು ಪೋಷಿಸಿ ಬೆಳೆಸಿದರೆ ಅದರಿಂದ ಹೆಚ್ಚು ಹೆಚ್ಚು ಫಲ ದೊರೆಯುತ್ತದೆ. ಅಂತಹ ಫಲಗಳಿಂದಲೇ ಬದುಕು ಸಾರ್ಥಕವನ್ನು ಹೊಂದುತ್ತದೆ.

ರವೀಂದ್ರನಾಥ ಠಾಕೂರರ ಒಂದು ಹೇಳಿಕೆ ಸತ್ಯದ ಅಮರತ್ವವನ್ನು ಸಾದರ ಪಡಿಸುತ್ತದೆ.

"ಸತ್ಯಕ್ಕಾಗಿ ಮರಣಹೊಂದುವವರು ಅಮರರಾಗುವರು. ಹಾಗೆಯೇ ಒಂದು ಇಡೀ ಜನಾಂಗವು ಸತ್ಯಕ್ಕಾಗಿ ಮರಣಿಸುವುದಾದರೆ ಅದೂ ಸಹ ಮಾನವತೆಯ ಇತಿಹಾಸದಲ್ಲಿ ಅಮರತ್ವವನ್ನು ಹೊಂದುವುದು".

---

# ಅಮೃತಪಾನ

ನಾ ಬಯಸಿದ ರಾಗ ನನ್ನದೆಯ
ವೀಣೆಯಲ್ಲಿ ನೀ ನುಡಿಸಲಿಲ್ಲ
ತಾಳ ತಪ್ಪಿತೋ, ಸ್ವರ ನಡುಗಿತೋ
ಇಂಪಾದ ಗಾನ ನಾ ಹಾಡಲಿಲ್ಲ
ನಿನ್ನ ಪಾಡಿಗೆ ನೀ ಮಧುರವಾಗಿ
ನುಡಿಸಿದೆ
ನಾ ಕೇಳದೆ ಹೊಂಗನಸಿನ ಅರುಣ
ರಾಗದಲಿ
ತೇಲುತ್ತ ಮುಳುಗುತ್ತ
ನಿರಾಸೆಯಲಿ ಅಪಶ್ರುತಿಯ ಬೆರೆಸಿದೆ.
ದಿಕ್ಕು ತಪ್ಪಿದ ಮಗುವಿನಂತಾದಾಗ
ಮೃದುವಾಗಿ ಕೇಳಿ ಬರುತ್ತಿತ್ತು
ಹಿಂದೆ ನಾನೊಲ್ಲದ ಗಾನ
ಅಮೃತ ಪಾನವಾಯಿತೆನಗೀಗ
ವೈಣಿಕ ಶ್ರೀರಾಘವೇಂದ್ರ ಗುರುವೆ
ನಿನ್ನ ಚರಣಗಳಲ್ಲಿ ಅನಂತ
ನೆಮ್ಮದಿಯ ಪಡೆಯುವೆ.

**ಉತ್ತನೂರು ಪದ್ಮಜಿ**



## ಗೃಹಲಕ್ಷ್ಮಿ





# ಗೌರೀದೇವಿ

ಶ್ರೀಮತಿ ಎಚ್. ಕೆ. ಅನಸೂಯ,
ಎಂ.ಎ.

" ಗೌರೀದೇವಿಯೇ ತಾಯೇ
ಶ್ರೀರಮ್ಯ ಕರ ಕಾಯೇ
ಸರಸಿಜೋದ್ಭವನ ಸೋದರಿಯೇ "

ಎಂದು ಗೌರೀದೇವಿಯನ್ನು ಆರಾಧಿಸುವುದು ನಮ್ಮಲ್ಲಿ ಪ್ರಜಲಿತವಿರುವ ಅನಾದಿಕಾಲದಿಂದಲೂ ಅವಿರತವಾಗಿ ನಡೆದುಬಂದಿರುವ ಸತ್ಸಂಪ್ರದಾಯ. ಗೌರೀದೇವಿಯನ್ನು ಭಕ್ತಿಯಿಂದ ಪೂಜಿಸುವ ಮಹಿಳೆಯರೆಲ್ಲರಿಗೂ ಆ ಸರ್ವಮಂಗಳೆ ಕರುಣೆಯಿಂದ ಸಮಸ್ತ ಸುಖ ಸಂತೋಷಗಳನ್ನು, ಸಕಲ ಸೌಭಾಗ್ಯವನ್ನು, ಸ್ವರ್ಗ ಸಾಮ್ರಾಜ್ಯವನ್ನೇ ನೀಡುವಳು ಎನ್ನುವುದು ಹಿಂದೂಗಳಲ್ಲಿನ ಅಚಲ ನಂಬಿಕೆ. ಸಾಮಾನ್ಯವಾಗಿ ಕೆಲವು ಹಿಂದೂಗಳಲ್ಲಿ ವಿವಾಹದ ದಿನ ಸರ್ವಾಲಂಕಾರ ಭೂಷಿತೆಯಾದ ಮದುಮಗಳು ಗೌರೀದೇವಿಯನ್ನು ಅಲಂಕರಿಸಿ ಭಕ್ತಿಯಿಂದ ಪೂಜಿಸಿ ದೀರ್ಘ ಸೌಮಂಗಲ್ಯಕ್ಕಾಗಿ ಬೇಡುವುದರಿಂದಲೂ, ನವವಧು ವಿವಾಹದ ದಿನ ನಿಷ್ಠೆಯಿಂದ ಭಕ್ತಿಯಿಂದ, ಗೌರೀಪೂಜೆ ಮಾಡುವುದರಿಂದಲೂ ಆಕೆಗೆ ಶಾಶ್ವತವಾಗಿ ಮುತ್ತೈದೆತನ ದೊರೆಯುವುದು ಎನ್ನುವುದೊಂದು ರೂಢಿ.

ಮದುವೆಯಾದ ನಂತರವೂ ಶ್ರಾವಣ ಮಾಸದ ಪ್ರತಿ ಮಂಗಳವಾರ ಮಂಗಳ ಗೌರೀಪೂಜೆಯನ್ನು ಮಾಡುವರು. ಮಂಗಳ ಗೌರಿಯನ್ನು ಅನನ್ಯ ಭಕ್ತಿಯಿಂದ ಪೂಜಿಸಿ, ಫಲ ಪುಷ್ಪಗಳಿಂದ ಅರ್ಚಿಸಿ, ತಂಬಿಟ್ಟಿನಾರತಿ ಬೆಳಗಿ ಮುತ್ತೈದೆತನಕ್ಕಾಗಿ ಬೇಡುವರು. ಅಂತೆಯೇ ನಮ್ಮಲ್ಲಿ ಪ್ರಜಲಿತವಿರುವ ಮತ್ತೊಂದು ಗೌರಿಪೂಜೆಯೆಂದರೆ ಚೈತ್ರಮಾಸದಲ್ಲಿ ನಡೆಸುವ ತದಿಗೆಗೌರಿ ಪೂಜೆ. ಅದರಲ್ಲೂ ಉತ್ತರ ಕರ್ನಾಟಕದ ಹಿಂದೂ ಗೃಹಗಳಲ್ಲಿ ಶ್ರಾವಣ ಮಾಸದ ಪ್ರತಿ ಶುಕ್ರವಾರ, ಶನಿವಾರಗಳಂದು ಗೌರಿ ದೇವಿಯನ್ನು ಕುರಿಸಿ ಪೂಜಿಸುವುದು ಅಲ್ಲಿನ ಗೃಹಿಣಿಯರಿಗೊಂದು ಹಬ್ಬ.

ಇವರ ಪ್ರತಿ ವರ್ಷವೂ ಭಾದ್ರಪದ ಶುದ್ಧ ತದಿಗೆಯ ದಿನ ನಡೆಸುವ ಸ್ವರ್ಣಗೌರಿ ವ್ರತ ಮಾತ್ರ ಅತ್ಯಂತ ಜನಪ್ರಿಯವಾದುದು ಹಾಗೂ ಮಹತ್ವಪೂರ್ಣವಾದುದು. ಅಂದು ಶುಚಿರ್ಭೂತರಾಗಿ, ಮಂಗಳ ಸ್ನಾನ ಮಾಡಿ ಗೌರೀದೇವಿಯನ್ನು ಮಂತ್ರ ಪೂರ್ವಕ ವಿಧಿಯಿಂದ ಪ್ರತಿಷ್ಠಾಪಿಸಿ ಅರಿಶಿನ ಕುಂಕುಮ, ಮರುಗ, ಮಲ್ಲಿಗೆ, ಜಾಜಿ, ಸಂಪಿಗೆ, ಸೇವಂತಿಗೆ, ಮುಂತಾದ ಸುಮಧುರ ಪುಷ್ಪಗಳಿಂದಲೂ, ಮಾಚಿಪತ್ರೆ, ಬಿಲ್ವಪತ್ರೆ, ತುಲಸೀ, ಪತ್ರೆ, ಕಸ್ತೂರಿಕಾ ಮುಂತಾದ ಸುಗಂಧಭರಿತ ಪತ್ರೆಗಳಿಂದಲೂ ಭಕ್ತಿಯಿಂದ ಪೂಜಿಸುವರು. ಆದಿಶಕ್ತಿ ಸ್ವರೂಪಿಣಿಯಾದ, ಮಂಗಳದಾಯಿನಿಯಾದ ಗೌರೀದೇವಿಗೆ ಬಳೆ, ಬಿಚ್ಚೋಲೆ, ಮೊರದ, ಬಾಗಿನ, ಕನ್ನಡಿ ಬಾಚಣಿಗೆ, ಕಂಗೊಳಿಸುವ ಗೆಜ್ಜೆವಸ್ತ್ರಗಳಿಂದ ಅಲಂಕರಿಸಿ, ವಿವಿಧ ರೀತಿಯ ಫಲಗಳ ನೈವೇದ್ಯಮಾಡಿ ಧೂಪದ ದೀಪದ ಆರತಿ ಬೆಳಗಿ, ಗೌರೀದೇವಿಯ ಪ್ರಸಾದವಾದ ಅರಿಶಿನದಾರ ನಮ್ಮ ಬಲ ಕೈಗೆ ಕಟ್ಟಿಕೊಳ್ಳುವುದು ರೂಢಿ. ಗೌರಿ ದೇವಿ ಮನೆಯನ್ನು ಬೆಳಗಿರುವಷ್ಟು ದಿನವೂ ಇದೇ ರೀತಿಯ ಪೂಜೆಯನ್ನು ಶ್ರದ್ಧೆಯಿಂದ ಸಲ್ಲಿಸಿ, ಮರುದಿನದಂದು ಆಕೆಯ ಮಡಿಲು ತುಂಬಿ, ಸೊಬಲಕ್ಕಿಯಿಟ್ಟು ಹುಳಿಯನ್ನ ಮೊಸರನ್ನದ ಬುತ್ತಿಯೊಂದಿಗೆ ಆಕೆಯನ್ನು ಪರಮೇಶ್ವರನ ದಿವ್ಯ ಸನ್ನಿಧಿಗೆ ಬೀಳ್ಕೊಡುವ ವಿಧಾನ ನಿಜಕ್ಕೂ ನಯನ ಮನೋಹರ ಸ್ವಂತ ಮಗಳನ್ನೇ ಪತಿಗೃಹಕ್ಕೆ ಕಳುಹಿಸಿ ಕೊಡುವಷ್ಟು ಹೃದಯ ಸ್ಪರ್ಶಿ-

ಗೌರೀದೇವಿಗೆ ಭಕ್ತಿಯಿಂದ ಪೂಜೆಯನ್ನು ಸಲ್ಲಿಸಿದರೆ ಸಕಲ ಸೌಭಾಗ್ಯಗಳು ದೊರೆಯುತ್ತವೆನ್ನುವುದಕ್ಕೆ ಒಂದು ಕಥೆಯೇ ಇದೆ ಪೂರ್ವಕಾಲದಲ್ಲಿ ವಿಮಲಾಪುರವೆಂಬ ಪಟ್ಟಣವನ್ನು ಚಂದ್ರಪ್ರಭುವೆಂಬ ಅರಸನು ಆಳುತ್ತಿದ್ದ. ಆ ರಾಜನು ಒಮ್ಮೆ ಕುದುರೆ ಸವಾರಿ ಮಾಡುತ್ತಾ ಬರುತ್ತಿರುವಾಗ ಸ್ತ್ರೀಯರ ಗುಂಪೊಂದು ಭಕ್ತಿಯಿಂದ ಪೂಜೆ ಮಾಡುತ್ತಿರುವುದನ್ನು ಕಂಡು, ಅದರ ಬಗೆಗೆ ಕೇಳಿದಾಗ ಆ ಸ್ತ್ರೀಯರಿಂದ ಅವರು ಮಾಡುತ್ತಿರುವುದು ಸ್ವರ್ಣ ಗೌರೀವ್ರತವೆಂದು ತಿಳಿಯಿತು. ಸ್ವರ್ಣ ಗೌರೀವ್ರತದ ಮಹಿಮೆಯನ್ನು, ಪೂಜಾವಿಧಾನವನ್ನು ಅವರಿಂದ ತಿಳಿದು ತನ್ನ ಪತ್ನಿಯರಿಬ್ಬರಿಗೂ ಆ ವ್ರತವನ್ನು ಮಾಡಲು ಪ್ರೇರೇಪಿಸಿದನು. ಹಿರಿಯ ಹೆಂಡತಿ ಆ ವ್ರತವನ್ನು ಧಿಕ್ಕರಿಸಿದಳು. ಆದರೆ ಕಿರಿಯ ಹೆಂಡತಿ ಆ ವ್ರತವನ್ನು ಭಕ್ತಿವಂತಳಾಗಿಮಾಡಿ, ವ್ರತದ ಮಹಿಮೆಯಿಂದ ಪತಿಪ್ರಿಯಳಾಗಿ ಸುಖ ಸಾಮ್ರಾಜ್ಯವನ್ನು ಪಡೆದು ಸಕಲ ಭೋಗಗಳನ್ನು ಅನುಭವಿಸುತ್ತ ನೆಮ್ಮದಿಯಿಂದಿದ್ದಳು. ಇತ್ತ ಹಿರಿಯ ಹೆಂಡತಿ ಸ್ವರ್ಣ ಗೌರಿಯನ್ನು ತಿರಸ್ಕರಿಸಿದ ಕಾರಣ ಐಶ್ವರ್ಯವನ್ನು ತೊರೆದು ಅನಾಥಳಂತೆ ಅರಣ್ಯಕ್ಕೆ ಹೊರಟುಹೋಗಿ ಅಲೆಯುತ್ತಾ ಇದ್ದಳು. ಎಲ್ಲರೂ ಆವಳನ್ನು ತಿರಸ್ಕರಿಸ

ಲಾರಂಭಿಸಿದಳು. ಇದರಿಂದ ನೋವುಂಟಾದ ಅವಳು ಗಟ್ಟಿಯಾಗಿ ಬಿಕ್ಕಿಬಿಕ್ಕಿ ಅಳುತ್ತ ಕುಳಿತು ಬಿಟ್ಟಳು. ಅವಳನ್ನು ಕಂಡು ಸ್ವರ್ಣಗೌರಿಗೆ ಅನುಕಂಪವುಂಟಾಗಿ ಅವಳೆದುರು ಪ್ರತ್ಯಕ್ಷವಾಗಿ ದರ್ಶನವನ್ನು ಕೊಟ್ಟಳು. ಆಗ ಅವಳಿಗೆ ಜ್ಞಾನೋದಯವಾಗಿ ಸ್ವರ್ಣಗೌರಿಗೆ ನಮಸ್ಕರಿಸಿ ಗೌರೀದೇವಿಯನ್ನು ವಿವಿಧ ಹೆಸರಿನಿಂದ ವಿವಿಧ ರೀತಿಯಲ್ಲಿ ಕೊಂಡಾಡುತ್ತಾ ಸ್ತುತಿಸುತ್ತಾ ನನ್ನ ಅಪರಾಧವನ್ನು ಕ್ಷಮಿಸೆಂದು ಬೇಡಿಕೊಂಡಳು. ಕೂಡಲೇ ಕರುಣಾಮಯಿಯಾದ ಗೌರಿದೇವಿ ಆಕೆಯ ಭಕ್ತಿಗೆ ಮೆಚ್ಚಿ ಅವಳಿಗೆ ಸಕಲ ಸುಖ ಸೌಭಾಗ್ಯಗಳನ್ನು ಕರುಣಿಸಿದಳು. ಅಂದಿನಿಂದಲೂ ಆಕೆಯೂ ಸ್ವರ್ಣಗೌರಿಯನ್ನು ಭಕ್ತಿಯಿಂದ ಪೂಜಿಸಲಾರಂಭಿಸಿದಳೆಂಬ ಕಥೆ ಪ್ರತೀತಿಯಿದೆ

ಆ ಪರಮೇಶ್ವರನ ಪ್ರಿಯಳಾದ, ಬೇಡಿದ ಇಷ್ಟಾರ್ಥಗಳನ್ನು ನೆರವೇರಿಸುವ ಶಂಕರಿಯವಳು ಪಾರ್ವತಿದೇವಿಯ ಅಂಶದವಳು ಎನ್ನುವ ಗೌರೀದೇವಿಯನ್ನು ಆರಾಧಿಸದವರಾರು? ಗಿರಿಜೆಯೆಂದು, ದಾಕ್ಷಾಯಿಣಿಯೆಂದು, ಚಾಮುಂಡಾಂಬೆಯೆಂದು, ಚಂಡಿಕೆಯೆಂದು, ಇಂದಿರಯೆಂದು ಅನೇಕ ನಾಮಗಳಿಂದ ಅವಳನ್ನು ಕೊಂಡಾಡುವರು. "ತಾಯೆ ಬಂದು ನೆಲಸೆ. ಇಂದಿರೇ ಎನ್ನ ಮಂದಿರದೊಳಗಾನಂದದಲಿ .. " ಎಂದು ಭಕ್ತಿಯಿಂದ ಅವಳನ್ನು ಕರೆದು. "ಕರಗಳನ್ನು ಮುಗಿದು ನಾವು ವರವ ಪಾಲಿಸೆಂದು ಬೇಡೋಣ . ' ಎಂದ ಬೇಡಿ "ಮುತ್ತೈದೆತನವನು ನಿತ್ಯವೀಯುತೆ ದೇವಿ. ನಿತ್ಯ ಸೌಭಾಗ್ಯವನ್ನಿತ್ತು ಕಾಪಾಡಬೇಕಮ್ಮ " ಎಂದು ಹಾಡಿ ನಮಿಸುವರು.

ಮನೆಮನೆಯ ಮಹಿಳೆಯರಿಗೆ ಸೌಮಂಗಲ್ಯವನ್ನು ನೀಡುವ, ಸೌಭಾಗ್ಯದಾತೆಯಾದ, ಮಂಗಳ ಸೂತ್ರವನ್ನು ಕಾಪಾಡುವ, ರಕ್ಷಿಸುವ ಸಿರಿಸಂಪದ ಮಾತೆಯಾಗಿ ಸಂಸಾರ ಸುಖಶಾಂತಿಯನ್ನು ಜಯ ಪಾಲಿಸುವ. ಶಕ್ತಿಮಾತೆಯಾದ ಆ ಮಹಿಮಾನ್ವಿತೆಯು, ಸೌಭಾಗ್ಯವಿಧಾತೆಯ ಕರುಣೆ ಸದಾ ಎಲ್ಲರ ಮೇಲಿರಲಿ ಎಂದು ಬೇಡುವ ಭಾಗ್ಯ ನಮ್ಮದಾದಾಗ ಅದಕ್ಕಿಂತ ಬೇರೆ ಪುಣ್ಯವುಂಟೇ? ★

# ನಾ ನಿನ್ನ ನಮಿಸುವೆನು

**ಎಂ. ಕೆ. ನಾಗರಾಜರಾವ್**



ಆಗಮಿಕರು ನಿನ್ನ ಅನಂತರೂಪನು ಎಂದು
ನೂರು ನಾಮಗಳಿಂದ ಪೂಜಿಸುವರು
ವೇದವಿದರು ನಿನ್ನ ಪರಮ ಪುರುಷನು ಎಂದು
ಆರಾಧನೆಯೆ ಗುರಿಯೆಂದು ಸಾರುತಿಹರು ೧

ಅರಿವು ನೀನೆನ್ನುವರು ; ಗುರುವು ನೀನೆನ್ನುವರು
ಹೊಳೆಹೊಳೆವ ದಿನಕರನ ಪ್ರಭೆಯು ನೀನೆನ್ನುವರು
ಮತ್ತೆ ವೇದಾಂತದಲಿ 'ತತ್ತ್ವಮಸಿ' ಎನ್ನುವರು
ನಾನೆ ನೀನೆನ್ನುವರು, ಅರಿತಿವರು ಯಾರು? ೨

ಆದಿ ನಿನಗಿಲ್ಲೆಂದು ; ಅಂತ್ಯನಿನಗಿಲ್ಲೆಂದು
ಆಕಾರವೂ ನಿನಗೆ ಇಲ್ಲೆಂದು ಹೇಳುವರು
ಹೇಗಿರುವೆಯೋ ಪ್ರಭುವೆ ನನಗೇಕೆ ಗೊಡವೆ
ನೀನಂತು ಇರುವೆ ; ನಾ ನಿನ್ನ ನಮಿಸುವೆನು. ೩

# ಆಡಳಿತ ನಿರ್ವಾಹಕ ಮಂಡಲಿಯ ತೀರ್ಮಾನಗಳು

ಶ್ರೀವೆಂಕಟೇಶ್ವರಸ್ವಾಮಿಯವರ ಮಹಾಪ್ರಸಾದದ ಪೊಟ್ಟಣಗಳನ್ನು ಇನ್ನು ಮುಂದೆ ಯಾತ್ರಿಕರಿಗೂ ಸೂಕ್ತ ಬೆಲೆಯಲ್ಲಿ ನೀಡಬೇಕೆಂದು ಕಾರ್ಯನಿರ್ವಹಣಾಧಿಕಾರಿಯವರನ್ನು ಕೇಳಲಾಯಿತು.

ಶ್ರೀವೆಂಕಟೇಶ್ವರಸ್ವಾಮಿಯ ಶುಕ್ರವಾರದ ಅಭಿಷೇಕದಲ್ಲಿ ರೂ 300 ಗಳ ಗಂಬುರ ಬಟ್ಟಲಿನ ಟಿಕೆಟ್ ಅನ್ನು ರದ್ದುಗೊಳಿಸಿ ರೂ 500 ಗಳ ಪೂರಾಭಿಷೇಕದ ಬಟ್ಟಲಿನ ಟಿಕೆಟ್ ಪಡೆದವರಿಗೆ 'ರಾಮುಲವಾರಿ ಮೇಡ'ದವರೆಗೆ ಪ್ರವೇಶಾವಕಾಶವನ್ನು ವಿಸ್ತರಿಸಬೇಕೆಂದೂ, ಅಭಿಷೇಕಾನಂತರ ಪಾದದರ್ಶನ ಮಾಡಬಯಸುವವರಿಗಾಗಿ ಅರ್ಜಿತ ತೋಮಾಲಸೇವಾನಂತರ ದರ್ಶನದಂತೆಯೇ ರೂ 50– ಟಿಕೆಟ್‌ನಿಂದ 'ನಿಜಪದ ದರ್ಶನ ಸೇವೆ'ಯನ್ನು ಆರಂಭಿಸಬೇಕೆಂದೂ ತೀರ್ಮಾನಿಸಲಾಯಿತು.

ತಿ. ತಿ ದೇವಸ್ಥಾನಗಳ ಒಡೆತನದಲ್ಲಿರುವ ಕಲ್ಯಾಣ ಮಂಟಪಗಳಲ್ಲಿ ಕಿರಿಯವುಗಳ ನಿರ್ವಹಣೆಯನ್ನು ಸ್ಥಳೀಯ ಸಲಹಾ ಸಂಘಗಳಿಗೇ ಒಪ್ಪಿಸಬೇಕೆಂದೂ, ದೇವಾದಾಯ ಕಮಿಷನರ್ ಅವರಿಂದ ನಾಮಕರಣ ಹೊಂದಿದ ಸ್ಥಳೀಯ ದೇವಾಲಯ ಕಾರ್ಯನಿರ್ವಹಣಾಧಿಕಾರಿಗಳು ಈ ಸಲಹಾಸಂಘದ ಸಮಾವೇಶಕಾರರಾಗಿರಬೇಕೆಂದೂ ತೀರ್ಮಾನಿಸಲಾಯಿತು.

ಅಂಗವಿಕಲರಿಗಾಗಿ ಆಂಧ್ರಬ್ಯಾಂಕ್‌ನವರು ರೂಪಿಸಿದ 'ಶ್ರೀವೆಂಕಟೇಶ್ವರ ವಿಕಲಾಂಗ ದಾನ ನಿಧಿ'ಯನ್ನು ಅಂಗೀಕರಿಸಲಾಯಿತು. ಹತ್ತುಸಾವಿರ ಹಾಗೂ ಹೆಚ್ಚಿನ ದಾನವನ್ನು ನೀಡುವವರ ಹೆಸರಿನಲ್ಲಿ ತಿ. ತಿ. ದೇ. ಕೃತ್ರಿಮ ಅವಯವ ಕೇಂದ್ರದಲ್ಲಿ ವಿಕಲಾಂಗರಿಗೆ ಕೃತ್ರಿಮ ಅವಯವಗಳನ್ನು ನೀಡಲಾಗುವುದು. ದಾನಿಗಳು ತಿರುಪತಿಗೆ ಆಗಮಿಸಿ ತಮ್ಮ ಹೆಸರಿನಲ್ಲಿ ನಡೆಯುವ ಈ ಕಾರ್ಯಕ್ರಮವನ್ನು ನೋಡಬಹುದು.

ತಿರುಮಲೆಯ ಶ್ರೀವೆಂಕಟೇಶ್ವರ ಸ್ವಾಮಿ ದೇವಾಲಯದ ಆನಂದ ನಿಲಯ ವಿಮಾನವು ಸ್ಪಷ್ಟವಾಗಿ ಹೊರಗಡೆಯಿಂದಲೂ ಕಾಣಿಸಲು ಅನುಕೂಲವಾಗುವಂತೆ ದೇವಾಲಯದ ಉತ್ತರ,ದಕ್ಷಿಣ, ಪೂರ್ವ, ಪಶ್ಚಿಮ ರಥ ಬೀದಿಗಳಲ್ಲಿನ ಭವನನಿರ್ಮಾಣಗಳಿಗೆ ಹಲವು ರೀತಿಯ ನಿಬಂಧನೆಗಳನ್ನು ವಿಧಿಸಲಾಯಿತು. ಹೊಸಕಟ್ಟಡಗಳ ಎತ್ತರ 15' ಗಿಂತಲೂ ಹೆಚ್ಚಾಗಬಾರದು. ಈಗಾಗಲೇ ಇರುವ ಒಂದಂತಸ್ತಿಗೂ ಮೀರಿದ ಕಟ್ಟಡಗಳಲ್ಲಿ ಹೊಸಬದಲಾವಣೆಗೆ ಅನುಮತಿ ನೀಡಬಾರದು. ರಥಬೀದಿಗಳ ಸರಹದ್ದುಗಳಲ್ಲಿನ ಎತ್ತರ 30' ಗೆ ಮೀರಬಾರದು ಎಂದು ತೀರ್ಮಾನಿಸಲಾಯಿತು

ಪ್ರಕಾಶಂ ಜಿಲ್ಲೆಯ ಒಂಗೋಲು ನಗರದಲ್ಲಿ. ಅಲ್ಲಿನ ಜಡ್. ಪಿ. ಪುರಪಾಲಕಸಂಘದವರು ನೀಡಿದ ಸ್ಥಳದಲ್ಲಿ ವಿವಾಹ ಮಂಟಪ, ಭೋಜನ ಮಂಟಪ ಹಾಗೂ ಎಂಟು ಕೊಠಡಿಗಳ ದೇವಸ್ಥಾನದ ಕಲ್ಯಾಣ ಮಂಟಪವನ್ನು ನಿರ್ಮಿಸಲು 16 ಲಕ್ಷ ರೂಗಳನ್ನು ಮಂಜೂರು ಮಾಡಲಾಯಿತು.

ತಿ ತಿ. ದೇ ಆಲಯಗಳ ಸರತಿಯಸಾಲಿನಲ್ಲಿ ಸರತಿಯಸಾಲಿನ ಶೆಡ್‌ಗಳಲ್ಲಿಯೂ, ಯಾತ್ರಿಕ ಸೇವೆಯ ಇತರ ಸ್ಥಳಗಳಲ್ಲಿಯೂ, ನಿಯಮಿತರಾದ ದೇವಸ್ಥಾನದ ಉದ್ಯೋಗಿಗಳಿಗೆ ಕಾಷಾಯ ವರ್ಣದ ಸ್ಕಾರ್ಫ್‌ಗಳನ್ನು ನೀಡಬೇಕೆಂದು ತೀರ್ಮಾನಿಸಲಾಯಿತು.

ತಿರುಚಾನೂರು ವಿದ್ಯುತ್ ಉಪಕಛೇರಿಯ ಬದಿಯ ದೇವಸ್ಥಾನದ ನಿವೇಶನದಲ್ಲಿ 800 ಮಂದಿ ಕುಳಿತು ಕೊಳ್ಳಲು ಅವಕಾಶವಾಗುವಂತಹ ಒಂದು ಸಭಾಭವನ, 300 ಮಂದಿಯ ಊಟದ ಕೋಣೆ ಹಾಗೂ ಕೊಠಡಿಗಳ ಕಲ್ಯಾಣ ಮಂಟಪ ನಿರ್ಮಾಣಕ್ಕಾಗಿ 25 ಲಕ್ಷರೂಗಳನ್ನು ತೆಗೆದಿರಿಸಲಾಯಿತು.

★

## ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ. ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೆ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ವೆಲ್‌ಫೇರ್ ಆಫೀಸರ್**
ಪಬ್ಲಿಕೇಷನ್ ಸೆಕ್ಷನ್
ಟಿ. ಟಿ. ಡಿ.
ತಿರುಪತಿ–517501

# ಶ್ರೀ ಪಾದರಾಜರ ಐದುನೂರನೇ ಆರಾಧನೆ



4–೧–82 ರಂದು ಮುಳಬಾಗಿಲಿನ ನರಸಿಂಹ ತೀರ್ಥದಲ್ಲಿ ಶ್ರೀ ವಿಜಯನಿಧಿ ತೀರ್ಥರ ಅಧ್ಯಕ್ಷತೆಯಲ್ಲಿ ನಡೆದ ಸಭೆ; ಪೇಜಾವರ ಶ್ರೀಪಾದಂಗಳು ಮಾತನಾಡುತ್ತಿದ್ದಾರೆ ಭಂಡಾರಿಕೇರಿ ಶ್ರೀಪಾದಂಗಳು ಬಲಗಡೆಗೆ ಉಪಸ್ಥಿತರು. ಹಿಂದೆ ನಿಂತಿರುವವರು ಶ್ರೀಪಾದರಾಜ ಮಠದ ಶ್ರೀ ಭೀಮಸೇನಾಚಾರ್ ಹಾಗೂ ಲೇಖಕ ಅರಳುಮಲ್ಲಿಗೆ ಪಾರ್ಥಸಾರಥಿ.

ಮುಳಬಾಗಿಲಿನ ನರಸಿಂಹ ತೀರ್ಥದಲ್ಲಿ ನಡೆದ ಶ್ರೀಪಾದರಾಜರ 500ನೇ ವಾರ್ಷಿಕ ಆರಾಧನೆ ಯಲ್ಲಿ ತಿರುಮಲೆ–ತಿರುಪತಿ ದೇವಸ್ಥಾನಗಳ ದಾಸ ಸಾಹಿತ್ಯ ಪ್ರಾಜೆಕ್ಟ್ ಎಂದಿನಂತೆ ಉತ್ಸಾಹ ಪೂರ್ಣವಾಗಿ ಮೂರು ದಿನಗಳ ಕಾಲ ಕಾರ್ಯ ಕ್ರಮಗಳನ್ನು ನೀಡಿ ದಾಸ ಸಾಹಿತ್ಯ ಸೌರಭ ವನ್ನು–ಮುಖ್ಯವಾಗಿ ಶ್ರೀಪಾದರಾಜ ಕೀರ್ತನ ಗುಂಜನವನ್ನು ಹತ್ತೂ ದಿಕ್ಕಿನಲ್ಲಿ ಹರಡುವಲ್ಲಿ ಯಶಸ್ವಿ ಯಾಯಿತು

ದಾಸಸಾಹಿತ್ಯ ಪ್ರಾಜೆಕ್ಟ್‌ನ 'ದಾಸ ಸಾಹಿತ್ಯ ಸಂಸ್ಕೃತಿ' ಪ್ರದರ್ಶನವನ್ನು ಉದ್ಘಾಟಿಸಿದ ಭಂಡಾರಕೇರಿ ಮಠದ ವಿದ್ಯಮಾನ್ಯ ತೀರ್ಥರು ಹಾಗೂ ಪೇಜಾವರ ಮಠದ ವಿಶ್ವೇಶತೀರ್ಥರು ವಸ್ತು ಪ್ರದರ್ಶನವನ್ನು ಮೆಚ್ಚಿಕೊಂಡದ್ದೇ ಅಲ್ಲದೆ, ಈ ಪ್ರದರ್ಶನದ ಮೂಲಕ ನಾಡಿನ ಮೂಲೆಮೂಲೆಯಲ್ಲಿ ದಾಸ ಸಾಹಿತ್ಯ ಹರಡು ವಂತಾಗಲಿ ಎಂದು ಹಾರೈಸಿದರು.

## ದಾಸಸಾಹಿತ್ಯ ಪ್ರಚಾರಯುಗ ಆರಂಭ ಆಗಲಿ

### —ಶ್ರೀ ಶ್ರೀ ವಿಶ್ವೇಶ ತೀರ್ಥರ ಕರೆ

ಸುಮಾರು ಎಂಟುನೂರು ವರ್ಷಗಳಿಂದಲೂ ಹರಿದಾಸಸಾಹಿತ್ಯ ರಚನೆ ಆಗು ತ್ತಿದ್ದು ಶಾಸ್ತ್ರಸಾಹಿತ್ಯದ ಪ್ರಖರ ಸೂರ್ಯ ಕಿರಣಗಳನ್ನು ಕೀರ್ತನೆಯ ಚಂದ್ರನ ಬೆಳಕನ್ನಾಗಿ ಪರಿವರ್ತಿಸಿ ನೀಡಿದ ದಾಸಸಾಹಿತ್ಯ ಈವರೆಗೆ ತಕ್ಕ ಪ್ರಸಾರ ಹೊಂದಿಲ್ಲ ವಾಗಿ ಶ್ರೀಪಾದರಾಜರ ೫೦೦ನೆಯ ಆರಾಧನೆಯ ಈ ಹೊತ್ತಿನಿಂದಲಾದರೂ ದಾಸ ಸಾಹಿತ್ಯದ ಪ್ರಸಾರ ಯುಗ ಆರಂಭವಾಗಲಿ ಎಂದು ಪೇಜಾವರ ಮಠದ ಶ್ರೀಪಾದಂ ಗಳ ಜನತೆಗೆ ಕಳಕಳಿಯ ಕರೆ ನೀಡಿದರು.

ತಿರುಮಲೆ ತಿರುಪತಿ ದೇವಸ್ಥಾನಗಳು ದಾಸಸಾಹಿತ್ಯ ಪ್ರಾಜೆಕ್ಟ್‌ನ ಮೂಲಕ ಹರಿದಾಸ ಸಾಹಿತ್ಯದ ಪ್ರಸಾರ ಕಾರ್ಯ ಕೈಗೊಂಡಿರುವುದು ಶ್ಲಾಘ್ಯವೆಂದು ಹೇಳುತ್ತ ತಮ್ಮ 'ಪೂರ್ಣಪ್ರಜ್ಞ ವಿದ್ಯಾಪೀಠ'ದಲ್ಲಿ ಅಂತಹ ಕೆಲಸ ಇನ್ನೂ ಆಗಿಲ್ಲದುದಕ್ಕೆ ಸಂಕೋಚವಾಗುತ್ತಿದೆ ಎಂದೊಪ್ಪಿಕೊಂಡು, ಇನ್ನು ಮುಂದೆ ವಿದ್ಯಾಪೀಠವೂ ಹರಿ ದಾಸಸಾತ್ಯ ಪ್ರಸಾರದಲ್ಲಿ ಶ್ರಮಿಸುವುದೆಂಬ ಭರವಸೆ ನೀಡಿದರು.



ವಿಶ್ವಪುರುಷ ಚಿತ್ರ

## ಸುಬ್ರಹ್ಮಣ್ಯ ಶ್ರೀಗಳ ಮಧುರ ಗಾಯನ

ಶ್ರೀಪಾದರಾಜರ ಮಠದ ವಿಜಯನಿಧಿ ತೀರ್ಥರು ಅಂದು ಅಲ್ಲಿಗೆ ಪಾರ್ಥಸಾರಥಿ ಅವರು ರಚಿಸಿದ 'ದಾಸಸಾಹಿತ್ಯ ವೈಭವ' ಮತ್ತು 'ರಂಗ ವಿಠಲ' ಕೃತಿಗಳನ್ನು ಬಿಡುಗಡೆ ಮಾಡಿದರು. ಕುಕ್ಕೆ ಸುಬ್ರಹ್ಮಣ್ಯ ಸ್ವಾಮಿಗಳು ತಮ್ಮ ಮಧುರ ಗಾಯನದಿಂದ ಸಭಿಕರನ್ನು ರಂಜಿಸಿದರು. ಸಾಮಾನ್ಯವಾಗಿ ಸನ್ಯಾಸಿಗಳಲ್ಲಿ ಮಠಾಧಿಪತಿಗಳಲ್ಲಿ ಅಪರೂಪವಾದ ಸಂಗೀತದ ನಿಷ್ಪತ್ತಿ, ಲಾಲಿತ್ಯಗಳು ದಾಸವರೇಣ್ಯರ ಕೃತಿಗಳ ಮೂಲಕ ಹರಿದು ಶ್ರೋತೃಗಳು ಆನಂದಾಶ್ರು ಕರೆಯುವಂತೆ ಮಾಡಿದವು. ಭದ್ರಗಿರಿ ಅಚ್ಯುತದಾಸರು "ಪುರಂದರ ದಾಸರು" ಹರಿಕಥೆಯ ಮೂಲಕ ಶ್ರೀನಿವಾಸ ನಾಯಕರ ಜೀವನವನ್ನು ಸಾದರಗೊಳಿಸಿದರು.

ಬೆಳ್ಳೂರು ಸೋದರಿಯರೆಂದು ಖ್ಯಾತರಾದ ರಾಧಾತಾಂಡವೇಶ್ವರಿ ರಮಾ ಸದಾಶಿವ್ ಅವರ ಗಾಯನದ ಗುಂಜನವು ನರಸಿಂಹತೀರ್ಥವನ್ನು ಶನಿವಾರ ತುಂಬಿತ್ತು. ದಯಾನಂದ ಮೋಹಿತೆ ಅವರ ಘಟ, ವಾಸುದೇವಾಚಾರ್ಯರ ಮೃದಂಗ ರಸಿಕ ಹೃದಯಾಕರ್ಷಕವಾಗಿದ್ದವು. ಪ್ರಭಾತ ಕಲಾವಿದರು ಅಭಿನಯಿಸಿದ 'ಮೋಹಿನಿಭಸ್ಮಾಸುರ' 'ಗೀತೋಪದೇಶ' 'ಬಾಗಿಲನು ತೆರೆದು ಸೇವೆಯನು ಕೊಡು ಹರಿಯೇ' ರೂಪಕಗಳು ತಮ್ಮ ನೆರಳು ಬೆಳಕಿನ ಸಂಯೋಜನೆ, ಶಬ್ದ ತಂತ್ರ, ಅಭಿನಯಗಳಿಂದಾಗಿ ಮೆಚ್ಚಿಸಿದವು.

ಅಂದು ವಿಜಯನಿಧಿ ತೀರ್ಥರೊಂದಿಗೆ ವಸ್ತು ಪ್ರದರ್ಶನವನ್ನು ಸಂದರ್ಶಿದ ಉತ್ತರಾದಿ ಮಠದ ಸತ್ಯಪ್ರಮೋದತೀರ್ಥರು ನಂತರದ ಬಹಿರಂಗ ಸಭೆಯಲ್ಲಿ ಮಾತನಾಡುತ್ತ ಗುರುವಿನ ಔನ್ನತ್ಯವನ್ನು, ಶಿಷ್ಯರ ವಿನಯ ಸಂಪನ್ನತೆಯನ್ನೂ ವಿವರಿಸುತ್ತ, ಶ್ರೀಪಾದರಾಜರು ಹಾಗೂ ವ್ಯಾಸರಾಯರ ಜೀವನವನ್ನೇ ಎರಡೂ ಕಡೆಗೂ ಉದಾಹರಿಸುತ್ತಾ "ಅನುಗ್ರಹ ಪಡೆಯಲು ಪ್ರಯತ್ನಿಸುವುದಾಗಿದ್ದಲ್ಲಿ ನಿಗ್ರಹ ಪಡೆಯುವ ಪ್ರಯತ್ನದಿಂದಲಾದರೂ ವಿರಮಿಸಬೇಕು, ಅಂತಹ ಸಂದರ್ಭದಲ್ಲಿ ದಾಸಸಾಹಿತ್ಯದ ನೆರವು ಮುಖ್ಯವಾಗುತ್ತದೆ" ಎಂದು ಶಾಸ್ತ್ರೀಯವಾಗಿ ವಿವರಿಸಿದರು

## ರಸೋಪೇತ ಉಪನ್ಯಾಸ

ಉದಯವಾಣಿ ಪತ್ರಿಕೆಯ ಉಪಸಂಪಾದಕ ಬನ್ನಂಜೆ ಗೋವಿಂದಾಚಾರ್ಯರು ದಾಸಸಾಹಿತ್ಯವನ್ನು ಕುರಿತು ಪುಷ್ಕಳವಾದ ರಸೋಪೇತವಾದ ಉಪನ್ಯಾಸವನ್ನು ನೀಡಿ, ದಾಸಸಾಹಿತ್ಯ ಪ್ರಾಜೆಕ್ಟ್ ತೆಲುಗುನಾಡಿನಲ್ಲಿ ಆಡಳಿತ ನಡೆಸಿದರೂ ಪ್ರಯೋಜನ ಕನ್ನಡದ ಜನತೆಗೆ ಆಗುತ್ತಿರುವುದನ್ನು ಶ್ಲಾಘಿಸಿದರು. ಪುಂಗನೂರಿನ ವಿದ್ವಾನ್ ವೈ. ಎಸ್ ಚಲಪತಿರಾವ್ ಮತ್ತು ಸಂಗಡಿಗರು ಸಭಿಕರನ್ನು ತಮ್ಮ ಸಂಗೀತದಿಂದ ತಲೆದೂಗುವಂತೆ ಮಾಡಿದರು ಹಂಡೆಗುರು ವೇದವ್ಯಾಸದಾಸರು ಶ್ರೀಪಾದರಾಜರ ಕೃತಿಗಳಲ್ಲಿ ಕಂಡುಬರುವ ಶ್ರೀ ಕೃಷ್ಣಲೀಲೆಗಳ ಬಗ್ಗೆ ಸ್ವಾರಸ್ಯವಾಗಿ ಹರಿಕಥೆ ಮಾಡುತ್ತಾ, ಭಾಗವತದಲ್ಲಿ ತತ್ಸಂಬಂಧಿ ಚಿತ್ರಗಳು ಹೇಗೆ ಬಂದಿವೆ ಎಂಬುದನ್ನು ಬೋಧಪ್ರದವಾಗಿ ವಿವರಿಸಿದರು

ದಾಸಸಾಹಿತ್ಯ ಪ್ರಾಜೆಕ್ಟ್‌ನ ವಿಶೇಷಾಧಿಕಾರಿ ಅಪ್ಪಣಾಚಾರ್ಯರು ಪ್ರಾಜೆಕ್ಟ್‌ನ ಕಾರ್ಯಕ್ರಮಗಳಿಗೆ ಅವಕಾಶ ಮಾಡಿಕೊಟ್ಟ ಶ್ರೀಪಾದರಾಜ ಮಠದವರನ್ನೂ ಪಾಲುಗೊಂಡ ಕಲಾವಿದರನ್ನೂ ವಂದಿಸಿದರು

೬-೬-೮೨ರ ರಾತ್ರಿ ಬಹು ಹೊತ್ತಿನವರೆಗೂ ವಸ್ತು ಪ್ರದರ್ಶನಕ್ಕೆ ಭಕ್ತಾದಿಗಳು ಆಗಮಿಸುತ್ತಲೇ ಇದ್ದು ದಾಸಸಾಹಿತ್ಯ ಸಂಸ್ಕೃತಿ ಪ್ರದರ್ಶನ ಯಶಸ್ವಿ ಆಯಿತು



ದಾಸ ಸಾಹಿತ್ಯ – ಸಂಸ್ಕೃತಿ ಪ್ರದರ್ಶನದ ಒಂದು ನೋಟ



ಈಚೆಗೆ ಹೈದರಾಬಾದಿನಲ್ಲಿ ದೇವದಾಯ ಕಮೀಷನರ್ ಶ್ರೀ ಪಿ. ಎಸ್. ರಾಜಗೋಪಾಲರಾಜು ಅವರು, ತ್ಯಾಗರಾಜರ ಕೃತಿಗಳ ಐದನೇ ಸಂಪುಟವನ್ನು ಬಿಡುಗಡೆ ಮಾಡಿದರು. ಚಿತ್ರದಲ್ಲಿ ಅವರ ಎಡಭಾಗದಲ್ಲಿ ತಿ. ತಿ ದೇ ಕಾರ್ಯನಿರ್ವಾಹಕ ಮಂಡಳಿಯ ಸದಸ್ಯ ಶ್ರೀ ವೀರಾರೆಡ್ಡಿ ಹಾಗೂ ಬಲಗಡೆಗೆ ಆಂಧ್ರಪ್ರದೇಶದ ಸಂಸ್ಕೃತಿ ಇಲಾಖಾ ಮಂತ್ರಿ ಶ್ರೀರಾಮಕೃಷ್ಣಂರಾಜು ಅವರನ್ನೂ ಕಾಣಬಹುದು.

## ರಾಷ್ಟ್ರಪತಿಯ

## ತಿರುಮಲೆ ಸಂದರ್ಶನ

ರಾಷ್ಟ್ರಪತಿ ಡಾ॥ ಎನ್. ಸಂಜೀವರೆಡ್ಡಿಯವರು ಕುಟುಂಬ ಸಹಿತವಾಗಿ ತಿರುಮಲೆಯ ಶ್ರೀ ವೆಂಕಟೇಶ್ವರ ಸ್ವಾಮಿಯ ಸೇವೆಯನು ಜೂನ್ 9ರಂದು ಮಾಡಿದರು ಆಲಯ ಮರ್ಯಾದೆಗಳೊಂದಿಗೆ ತಿರುಮಲೆಗೆ ಸ್ವಾಗತಿಸಲ್ಪಟ್ಟ ಡಾ॥ ಸಂಜೀವರೆಡ್ಡಿಯವರು ದೇವಾಲಯದಲ್ಲಿ ಪೂಜೆಕಾಣಿಕೆಗಳನ್ನು ಒಪ್ಪಿಸಿದ ನಂತರ ವಿಶೇಷ ಬ್ರಹ್ಮೋತ್ಸವಗಳ ಸಲುವಾಗಿ ನಡೆಯುತ್ತಿದ್ದ ಹೋಮ ಹವನಗಳಲ್ಲೂ ಭಾಗವಹಿಸಿದರು.

ಅಂದಿನ ರಾತ್ರಿ ಆರ್ಷಸದನ್ ಭವನದಲ್ಲಿ ನಡೆದ ಪುಸ್ತಕ ಬಿಡುಗಡೆ ಸಮಾರಂಭದಲ್ಲಿ ರಾಷ್ಟ್ರಪತಿಯವರು 'ಆರ್ಷ ವಿಜ್ಞಾನ ಸರ್ವಸ್ವಂ' ಪುಸ್ತಕದ ಮೊದಲಸಂಪುಟವನ್ನು ಬಿಡುಗಡೆ ಮಾಡಿದರು. (ಸಂಪಾದಕ ಶ್ರೀ ಎಸ್ ಬಿ ರಘುನಾಥಾಚಾರ್ಯ.) ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ ವಿ. ಆರ್. ಕೆ ಪ್ರಸಾದರು ಆರ್ಷ ವಿಜ್ಞಾನ ಸರ್ವಸ್ವದ ಹೊರಬರಲಿರುವ ಮಿಕ್ಕ ಸಂಪುಟಗಳ ವಿಷಯ ಪರಿಚಯವನ್ನು ಮಾಡಿಕೊಟ್ಟರು

## ತಿರುಮಲೆಯಲ್ಲಿ ಕರ್ನಾಟಕದ ರಾಜ್ಯಪಾಲರು

ಕರ್ನಾಟಕದ ರಾಜ್ಯಪಾಲ ಶ್ರೀ ಗೋವಿಂದ ನಾರಾಯಣ್ ಹಾಗೂ ಅವರ ಕುಟುಂಬ ಶ್ರೀಮತಿ ಚಂದ್ರಾಗೋವಿಂದನಾರಾಯಣ್ ಅವರುಗಳು ತಿರುಮಲೆಗೆ ದಿನಾಂಕ 15–6–82 ರಂದು ಆಗಮಿಸಿ ಸ್ವಾಮಿಸೇವೆ, ಅರ್ಚನೆಮಾಡಿ ಅಂದು ನಡೆದ ಬ್ರಹ್ಮೋತ್ಸವದ ಉತ್ಸವಗಳಲ್ಲಿ ಭಾಗವಹಿಸಿದರು.

ಅಂದು ಸಂಜೆಯ ಯಾತ್ರಿಕ ಸೇವಾಸಂಘದ ರಜತೋತ್ಸವದ ಸಭೆಯಲ್ಲಿ ರಾಜ್ಯಪಾಲರು ತಿ ತಿ. ದೇ. ದಾಸಸಾಹಿತ್ಯ ವಿಭಾಗದ ಶ್ರೀನಿವಾಸನ ಹಾಡುಗಳು ಸಂಪುಟ–2 (ಶ್ರೀಪಾದರಾಜರು, ವ್ಯಾಸರಾಜರು, ಕನಕದಾಸರು, ವಾದಿರಾಜರುಗಳ ಕೃತಿಗಳು) ಹಾಗೂ 'ಸ್ತೋತ್ರಕುಸುಮ ಮಾಲೆ' ಪುಸ್ತಕಗಳನ್ನೂ ತಿ ತಿ ದೇ ಧನಸಹಾಯದಿಂದ ಪ್ರಕಟವಾದ ಕೆ. ವಿ ವೆಂಕಟನರಸಿಂಹಯ್ಯನವರ 'ಸಂಕ್ಷೇಪಭಾಗವತ' ಕೃತಿಯನ್ನೂ ಬಿಡುಗಡೆ ಮಾಡಿದರು. ಬೆಂಗಳೂರು ನಗರಾಭಿವೃದ್ಧಿ ಮಂಡಳಿಯ ಪ್ರಾಧಿಕಾರಿ ಶ್ರೀ ಕೆ ಕೆ. ಮೂರ್ತಿ ಅವರು ಅಧ್ಯಕ್ಷತೆ ವಹಿಸಿದ್ದರು

ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ. ವಿ ಆರ್. ಕೆ ಪ್ರಸಾದರು ಮುಖ್ಯ ಅತಿಥಿಯಾಗಿ ಭಾಗವಹಿಸಿದ ಸಭೆಯಲ್ಲಿ ಯಾತ್ರಿಕ ಸೇವಾಸಂಘದ ಅಧ್ಯಕ್ಷ ದೀನಬಂಧು ಶ್ರೀ ವಿ ಆರ್. ನಾಯುಡು ಅವರು ಸಭೆಯನ್ನು ಸ್ವಾಗತಿಸಿದರು. ಸಂಘದ ಕಾರ್ಯದರ್ಶಿ ಶ್ರೀ ಎಸ್. ಆರ್. ಚಂದ್ರಶೇಖರ್ ಅವರು ವಂದನೆ ಸಲ್ಲಿಸಿದರು.

ಶ್ರೀ ಪ್ರಸಾದರು ಮಾತನಾಡುತ್ತ ಯಾತ್ರಿಕ ಸೇವಾಸಂಘದಂತಹ ಸ್ವಯಂ ಸೇವಕ ಸಂಸ್ಥೆಗಳು ನಾಡಿನಲ್ಲಿ ಹೆಚ್ಚು ಹೆಚ್ಚಿಗೆ ಬೆಳೆದು ಹಿಂದೂ ಧರ್ಮದ ಪುರೋಭಿವೃದ್ಧಿಗಾಗಿ ದೇವಾಲಯಗಳಿಗೆ ಬೆಂಬಲ ನೀಡಬೇಕೆಂದೂ ಹೇಳುತ್ತ, ದೀನಬಂಧು ವಿ. ಆರ್. ನಾಯುಡು ಮತ್ತು ಅವರ ಸಹಕಾರ್ಯಕರ್ತರ ಸೇವಾಕಾಂಕ್ಷೆ, ದೈವಭಕ್ತಿಗಳನ್ನು ಪ್ರಶಂಸಿದರು

## ಕ್ಲೋಸ್ಡ್ ಸರ್ಕ್ಯೂಟ್ ಟಿ. ವಿ.

ತಿರುಮಲೆಯ ಶ್ರೀವೆಂಕಟೇಶ್ವರ ಸ್ವಾಮಿ ಆಲಯದಲ್ಲಿನ ಹುಂಡಿ, ಬಂಗಾರದ ಬಾಗಿಲು, ಪರಕಾಮಣಿ ಮೊದಲಾದ ಸ್ಥಳಗಳಲ್ಲಿ ನಡೆಯುವ ವಿದ್ಯಾಮಾನಗಳನ್ನು ತೋರಿಸುವ ಕ್ಲೋಸ್ಡ್ ಸರ್ಕ್ಯೂಟ್ ಟಿ. ವಿ ಯನ್ನು ಸುಮಾರು 8.5 ಲಕ್ಷ ರೂಗಳ ವೆಚ್ಚದಲ್ಲಿ ನಿರ್ಮಿಸಲಾಗಿದ್ದು, ಈ ದೂರದರ್ಶಿ ಧ್ವನಿರ್ಥಕ ವ್ಯವಸ್ಥೆಯನ್ನೂ ರಾಜ್ಯಪಾಲರು ಉದ್ಘಾಟಿಸಿದರು.






Edited and Published on behalf of the T. T. Devastanams by K. Subba Rao, M. A., and Printed at T. T. D. Press by M. Vijayakumar Reddy, Manager, T. T. D. Press, Tirupati - 517 501·

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ.

## ವಿವಿಧ ಆರ್ಜಿತ ಉತ್ಸವಗಳ ದರ ವಿವರಣೆ

ವಿಶೇಷ ಪ್ರವೇಶ ರೂ 25-00
(ಸರ್ವದರ್ಶನ ಸಮಯದಲ್ಲಿ ಮಹಾದ್ವಾರದ ಬಳಿಯಲ್ಲಿ ಸರತಿಯಸಾಲಿನಲ್ಲಿ ಸೇರುವಿಕೆ)

### ಸೇವೆಗಳು

| | | |
|---|---|---|
| 1. | ಆಮಂತ್ರಣೋತ್ಸವ[1] | ರೂ 400 |
| 2 | ಅಭಿಷೇಕ* | ರೂ 500 |
| 3. | ಪುನುಗು* | ರೂ 200 |
| 4 | ಜಾಫ್ರಾ* | ರೂ 100 |
| 5. | ಕಸ್ತೂರಿ* | ರೂ 100 |
| 6. | ಸಹಸ್ರಕಲಶಾಭಿಷೇಕ | ರೂ 3000 |
| 7. | ತಿರುಪ್ಪಾವಡಾ[2] | ರೂ 6000 |
| 8. | ಕೋಯಿಲ್ ಆಳ್ವಾರ್ ತಿರುಮಂಜನ | ರೂ 3000 |
| 9 | ಮುಕುರ ಮಂಟಪದಲ್ಲಿ ಡೋಲೋತ್ಸವ[2] | ರೂ 1500 |
| 10. | ಸಹಸ್ರದೀಪಾಲಂಕಾರ ಸೇವೆ | ರೂ 2000 |

### ಉತ್ಸವಗಳು

| | |
|---|---|
| ವಸಂತೋತ್ಸವ | ರೂ 3000 |
| ಕಲ್ಯಾಣೋತ್ಸವ | ರೂ 2000 |
| ಬ್ರಹ್ಮೋತ್ಸವ | ರೂ 750 |
| ತೆಪ್ಪೋತ್ಸವ[2] | ರೂ 2500 |
| ಪವಿತ್ರೋತ್ಸವ | ರೂ 2500 |

### ವಾಹನಗಳು

| | |
|---|---|
| ಬಂಗಾರದ ಗರುಡ, ಕಲ್ಪವೃಕ್ಷ, ಸೂರ್ಯಪ್ರಭ, ಸರ್ವಭೂಪಾಲ, ಪ್ರತಿ ಒಂದಕ್ಕೆ | ರೂ 125 |
| ಬೆಳ್ಳಿಯ ಗರುಡ, ಚಿಕ್ಕಶೇಷ, ಚಂದ್ರಪ್ರಭ, ಗಜ, ತುರಗ, ಹಂಸ, ಹನುಮಂತ ಪ್ರತಿ ಒಂದಕ್ಕೆ | ರೂ 100 |

1. ಆಮಂತ್ರಣೋತ್ಸವಕ್ಕೆ ಇಬ್ಬರಿಗೆ ಮಾತ್ರ ಪ್ರವೇಶ.
* 2,3,4,5,6, ಸೇವೆಗಳಿಗೆ ಒಬ್ಬರಿಗೆ ಮಾತ್ರ ಪ್ರವೇಶ.
2 ಈ ಸೇವೆಗಳಲ್ಲಿ ಐದು ಗ್ರಾಂನ ಚಿನ್ನದ ಪದಕವನ್ನು ಬಹೂಕರಿಸಲಾಗುವುದು.

ವಿವರಗಳಿಗೆ: **ಪೇಷ್ಕಾರ್, ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ** ಇವರಿಗೆ ಬರೆಯಿರಿ
ಅಥವಾ **ತಿರುಮಲೆಯ ವಿಜಯಾ ಬ್ಯಾಂಕಿನಲ್ಲಿ** ವಿಚಾರಿಸಿ

---

# ತಿರುಮಲೆ ತಿರುಪತಿಗಳಲ್ಲಿ ವಸತಿ ಸೌಲಭ್ಯ

### ತಿರುಮಲೆ

| | | |
|---|---|---|
| ವಿಶೇಷ ರೀತಿಯ ಕಾಟೇಜುಗಳು | ದಿನವೊಂದಕ್ಕೆ | ರೂ75-00 |
| ಟಿ.ಬಿ ಸಿ ಒಳಗಿನ ಕಾಟೇಜುಗಳು | " | ರೂ 50-00 |
| ಎಸ್. ವಿ. ಅತಿಥಿಗೃಹ ತಿರುಮಲೆ | | |
| ಅ) ದೊಡ್ಡ ಕೋಣೆಗಳು | ,, | ರೂ 50-00 |
| ಅ) ಮೂಲೆಯ ಕೋಣೆಗಳು | ,, | ರೂ 40-00 |
| ಇ) ಕಿರಿಯ ಕೋಣೆಗಳು | ,, | ರೂ 35-00 |
| ಎಚ್. ಆರ್. ಜಿ. ಕಾಟೇಜು | ,, | ರೂ 150-00 |
| ಮದುವೆಯ ಹಾಲ್‌ಗಳು | | |
| ರೂಯಾ ಕಾಟೇಜು | ,, | ರೂ 80-00 |
| ಗೋಗಿನೇನಿ ಕಾಟೇಜು | ,, | ರೂ 80-00 |
| ಸಿ.ಸಿ. ಕಾಟೇಜು | ,, | ರೂ 100-00 |
| ಎಸ್.ಎಂ.ಸಿ. ಪೂರ್ವ ನಂ. 9 | ,, | ರೂ 50-00 |
| ಎ.ಟಿ.ಸಿ. ನಂ. 39 | ,, | ರೂ 80-00 |
| ಶಂಖುಮಿಟ್ಟ ಕಾಟೇಜುಗಳು (ಪೂರ್ತಿ) | | ರೂ 20-00 |
| ಶೇಷಾದ್ರಿನಗರ ,, | ,, | ರೂ 20-00 |
| ಅಂಜನಾದ್ರಿನಗರ ,, | ,, | ರೂ 20-00 |
| ಗರುಡಾದ್ರಿನಗರ ,, | ,, | ರೂ 20-00 |

ವಿವರಗಳಿಗೆ: ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಮಲೆ

### ತಿರುಪತಿ

| | |
|---|---|
| ಶ್ರೀನಿವಾಸ ಸತ್ರ ಎರಡು ಹಾಸಿಗೆಗಳಕೋಣೆ | ರೂ 20-00 |
| ನಾಲ್ಕು " | ರೂ 25-00 |
| ಒಂದು " | ರೂ 15-00 |
| ಶ್ರೀ ಪದ್ಮಾವತಿ ಅತಿಥಿಗೃಹ | |
| ಹವಾನಿಯಂತ್ರಿತ 2 ಹಾಸಿಗೆಗಳ ಕೋಣೆ | ರೂ 50-00 |
| ,, ಒಂದು ಹಾಸಿಗೆಯ ಕೋಣೆ | ರೂ 30-00 |
| ಶ್ರೀ ವೆಂಕಟೇಶ್ವರ ಅತಿಥಿಗೃಹ | |
| ಎರಡು ಹಾಸಿಗೆಗಳ ಕೋಣೆ | ರೂ 20-00 |

ವಿವರಗಳಿಗೆ: ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಪತಿ.

**ತಿರುಮಲೆ-ತಿರುಪತಿಗಳಲ್ಲಿನ ವಸತಿಯನ್ನು ಕಾಯ್ದಿರಿಸಬಹುದು. ಆಯಾ ವಸತಿಸೌಕರ್ಯಕ್ಕೆ ಅನುಗುಣವಾದ ಹಣದ ಡಿ. ಡಿ. ಯನ್ನು ಕಳುಹಿಸುವಾಗ ಅಂಚೆ ವಿಳಾಸ ಹಾಗೂ ಅಪೇಕ್ಷಿತ ವಸತಿ ಸೌಕರ್ಯದ ವಿವರಗಳನ್ನು ಸ್ಪಷ್ಟವಾಗಿ ಇಂಗ್ಲೀಷಿನಲ್ಲಿ ಬರೆಯಿರಿ. ಅಪೇಕ್ಷಿತ ವಸತಿ ಸೌಕರ್ಯ ಲಭ್ಯವಿಲ್ಲದಾಗ ಇತರೆ ವಸತಿಯನ್ನು ಕಾಯ್ದಿರಿಸಿ ಹೆಚ್ಚಿನ ಹಣವನ್ನು ನೀವು ಇಲ್ಲಿ ಬಂದಾಗ ಹಿಂದಿರುಗಿಸಲಾಗುವುದು. ಕಾಯ್ದಿರಿಸಿದ ಬಗ್ಗೆ ಪತ್ರವನ್ನು ಕಳುಹಿಸಲಾಗುತ್ತದೆ, ಅದನ್ನು ತೆಗೆದುಕೊಂಡೇ ತಿರುಪತಿ; ತಿರುಮಲೆಗಳಿಗೆ ಬನ್ನಿರಿ. ಅಂಚೆಯಲ್ಲಿನ ವಿಳಂಬಕ್ಕೆ ತಿ.ತಿ.ದೇ. ಹೊಣೆಯಲ್ಲ. ಮೀಸಲಾತಿಯ ಹಕ್ಕು ತಿ.ತಿ.ದೇ. ಗಳದ್ದು.**

**ತಿರುಮಲೆ ತಿರುಪತಿ ದೇವಸ್ಥಾನ.**

Regd No. H/TRP 14

ಬಿಡಿಪ್ರತಿ ಬೆಲೆ ರೂ 1-00

ಶ್ರೀ ವೆಂಕಟೇಶ್ವರ ಪರಬ್ರಹ್ಮಣೇನಮಃ

**ನೀವು ಹಿಂದೂಗಳಾಗಿದ್ದೀರಿ-ಹೆಮ್ಮೆ ಹೊಂದಿರಿ.**

**ಅತಿಶ್ರೇಷ್ಠ ಪರಂಪರೆ ನಿಮ್ಮದೆಂಬುದನ್ನು ನೆನೆಯಿರಿ.**

**ದೃಢವಾದ ತಾತ್ವಿಕ ತಳಹದಿಯನ್ನುಳ್ಳ ಹಿಂದೂಧರ್ಮವು ಧರ್ಮಗಳ ಧರ್ಮವಾಗಿದೆ.**

**ನಿಜವಾದ ಹಿಂದೂಗಳಾಗಿರಿ-ಈ ಅಂಶಗಳನ್ನು ಗಮನಿಸಿ.**

★ ನಿಮ್ಮ ಅಪೇಕ್ಷೆಯ ಸಂಕೇತವನ್ನು (ತಿಲಕ, ಗಂಧ, ವಿಭೂತಿ, ನಾಮ) ಹಣೆಯಲ್ಲಿ ಧರಿಸುವ ಆಚಾರವನ್ನು ಅಭ್ಯಸಿಸಿ.

★ ಸ್ನಾನದ ನಂತರ ದಿನಕ್ಕೊಮ್ಮೆಯಾದರೂ ನಾಮಜಪ ಮಾಡಿರಿ.

**ಹಲವು ನಾಮಜಪಗಳನ್ನು ಸೂಚಿಸಲಾಗಿದೆ ನಿಮಗಿಷ್ಟವಾದುದನ್ನು ಆಯ್ಕೆ ಮಾಡಿ ಕೊಳ್ಳಿರಿ.**

ಓಂ ಶ್ರೀ ವೆಂಕಟೇಶಾಯ ನಮಃ
ಓಂ ನಮೋ ಭಗವತೇ ವಾಸುದೇವಾಯ
ಓಂ ನಮೋ ನಾರಾಯಣಾಯ
ಓಂ ನಮಃ ಶಿವಾಯ

ಹರೇ ರಾಮ ಹರೇ ರಾಮ
ರಾಮ ರಾಮ ಹರೇ ಹರೇ
ಹರೇ ಕೃಷ್ಣ ಹರೇ ಕೃಷ್ಣ
ಕೃಷ್ಣ ಕೃಷ್ಣ ಹರೇ ಹರೇ

★ ಪ್ರತಿ ದಿನವೂ ಶ್ರೀವೆಂಕಟೇಶ್ವರ ಸುಪ್ರಭಾತದ ಕೆಲವು ಶ್ಲೋಕಗಳನ್ನಾದರೂ ಹೇಳಿಕೊಳ್ಳಿರಿ

★ ವಾರಕ್ಕೊಮ್ಮೆ ನಿಮ್ಮ ಆಯ್ಕೆಯ ದೇವಾಲಯಕ್ಕೆ ಕುಟುಂಬದ ಎಲ್ಲ ಸದಸ್ಯರೊಂದಿಗೆ ಹೋಗಿ ದೇವರ ಪ್ರಾರ್ಥನೆ ಮಾಡಿರಿ.

★ ನಿಮ್ಮ ವಾಸಸ್ಥಳದಲ್ಲಿ 'ಓಂ'ಕಾರವನ್ನು ಹಚ್ಚಿರಿ.

★ ಭಗವದ್ಗೀತೆಯ ಒಂದು ಶ್ಲೋಕವನ್ನಾದರೂ ದಿನಕ್ಕೊಮ್ಮೆ ಪಠಿಸಿರಿ.

★ ಹಿಂದೂ ಧಾರ್ಮಿಕ ಸಾಮಾಜಿಕ ಹಬ್ಬಗಳಲ್ಲಿ ಭಾಗವಹಿಸಿರಿ.

---

**ಅವನಲ್ಲಿ ನಂಬಿಕೆಯಿಡಿ-ಅವನು ನಿಮ್ಮನ್ನು ಕಾಪಾಡುತ್ತಾನೆ.**

---

ತಿರುಮಲೆ ತಿರುಪತಿ ದೇವಸ್ಥಾನಗಳು
ತಿರುಪತಿ.